# ಚನ್ನಪಟ್ಟಣದ ಚಿತ್ತಾರದ ಗೊಂಬೆಗಳು

ಎಂ.ಫಿಲ್.ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಿದ ಕಿರು ಸಂಶೋಧನಾ ಪ್ರಬಂಧ




ಮಾರ್ಗದರ್ಶಕರು
ಡಾ.ಎಸ್.ಸಿ.ಪಾಟೀಲ
ಡೀನ್,ಲಲಿತಕಲಾ ನಿಕಾಯ
ಪ್ರಾಧ್ಯಾಪಕರು ಹಾಗೂ ಮುಖ್ಯಸ್ಥರು
ದೃಶ್ಯಕಲಾ ವಿಭಾಗ
ಕನ್ನಡ ವಿಶ್ವವಿದ್ಯಾಲಯ ಹಂಪಿ

ಸಂಶೋಧಕ
ಬಿ.ದಿನೇಶ್
ದೃಶ್ಯಕಲಾ ವಿಭಾಗ
ಕನ್ನಡ ವಿಶ್ವವಿದ್ಯಾಲಯ,ಹಂಪಿ






# ಚನ್ನಪಟ್ಟಣದ ಚಿತ್ತಾರದ ಗೊಂಬೆಗಳು

(ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಸಂಪ್ರಬಂಧ)



ಸಂಶೋಧಕರು

ದಿನೇಶ್ ಬಿ.

ಮಾರ್ಗದರ್ಶಕರು

ಡಾ. ಎಸ್.ಸಿ. ಪಾಟೀಲ

ಮುಖ್ಯಸ್ಥರು ಮತ್ತು ಪ್ರಾಧ್ಯಾಪಕರು






ಲಲಿತಕಲಾ ನಿಕಾಯ

ದೃಶ್ಯಕಲಾ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - ೫೮೩ ೨೭೬

೨೦೦೯-೧೦

## ಪ್ರಮಾಣ ಪತ್ರ

**"ಚನ್ನಪಟ್ಟಣದ ಚಿತ್ತಾರದ ಗೊಂಬೆಗಳು"** ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಡಾ. **ಎಸ್.ಸಿ. ಪಾಟೀಲ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಸಂಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

Dinesh B

ದಿನಾಂಕ : 15/9/2010
ಸ್ಥಳ : ವಿದ್ಯಾರಣ್ಯ

(ದಿನೇಶ್ ಬಿ.)
ಸಂಶೋಧಕರು
ದೃಶ್ಯಕಲೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

# ದೃಢೀಕರಣ ಪತ್ರ

**"ಚನ್ನಪಟ್ಟಣದ ಚಿತ್ತಾರದ ಗೊಂಬೆಗಳು"** ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ದಿನೇಶ್ ಬಿ. ಇವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರಸ್ತುತ ಸಂಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ : 15/9/10

(ಡಾ. ಎಸ್.ಸಿ. ಪಾಟೀಲ)
ಪ್ರಾಧ್ಯಾಪಕರು ಮತ್ತು ಮಾರ್ಗದರ್ಶಕರು
ದೃಶ್ಯಕಲಾ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

# ಪರಿವಿಡಿ

## ಅಧ್ಯಾಯ ೧

# ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ ಮತ್ತು ಸ್ವರೂಪ

**ಸಾ**ಮಾನ್ಯವಾಗಿ ಯಾವುದೇ ಒಂದು ಭಾಷೆಯ ಉದಯದೊಡನೆ ಸಾಹಿತ್ಯವೂ ಉದಯವಾಗುತ್ತದೆ. ಅದರ ಜೊತೆ ಜೊತೆಯಲ್ಲಿ ಕಲೆ ಅರಳುತ್ತದೆ. ದೇಶಾತಿತವಾದ ಕಲಾಪ್ರಪಂಚ ತುಂಬಾ ವಿಶಾಲವಾದ ವ್ಯಾಪ್ತಿಯನ್ನು ಹೊಂದಿದೆ. ಯಾವುದೇ ಒಂದು ದೇಶದ ಸಂಸ್ಕೃತಿಯನ್ನು ಕುರಿತು ಅಧ್ಯಯನ ಮಾಡುವಾಗ ಕಲೆಗಳು ಆಯಾ ದೇಶದ ಸಂಸ್ಕೃತಿಯ ಪಡಿನೆರಳಾಗಿರುತ್ತದೆ. ಅವು ಆ ಸಂಸ್ಕೃತಿಯ ತೋರ್ಬೆರಳಾಗಿಯೂ, ದೀವಿಗೆಯಾಗಿಯೂ ಕಾರ್ಯನಿರ್ವಹಿಸುತ್ತವೆ. ಭಾರತದಲ್ಲಿ ಕಲೆಗಳ ಸಂಖ್ಯೆ ಅರವತ್ನಾಲ್ಕು ಎಂದು ನಮ್ಮ ಪ್ರಾಚೀನರು ಉಲ್ಲೇಖಿಸುತ್ತಾ ಬಂದಿದ್ದಾರೆ. ಅವು ಯಾವ ಕೆಲಸ ಅಥವಾ ಕೃತಿಯಲ್ಲಿ ಕೌಶಲ್ಯವಿದೆಯೋ ಅಲ್ಲೆಲ್ಲ ಕಲೆಯಿದೆ ಎಂಬುದು ಅವರ ಅಭಿಮತವಾಗಿತ್ತು. ಆದರೆ ಆಧುನಿಕರು ಕಲೆಗಳಲ್ಲಿ "ಲಲಿತಕಲೆ" ಮತ್ತು "ಕುಶಲಕಲೆ" ಎಂದು ಸ್ಪಷ್ಟವಾಗಿ ವಿಂಗಡನೆ ಮಾಡಿರುವುದುಂಟು.

ಸಾಮಾನ್ಯವಾಗಿ ಲಲಿತಕಲೆಗಳನ್ನು ಶುದ್ಧ ಕಲೆಯೆಂದು, ಕುಶಲಕಲೆಗಳನ್ನು ಪ್ರಯೋಜಕ ಕಲೆಗಳೆಂದು ಕರೆಯಲಾಗುತ್ತದೆ. ಮುಖ್ಯವಾಗಿ ಕಾವ್ಯ, ನಾಟಕ, ಸಾಹಿತ್ಯ, ನೃತ್ಯ, ಚಿತ್ರಕಲೆ ಮತ್ತು ವಾಸ್ತುಶಿಲ್ಪ ಈ ಏಳು ಕಲೆಗಳನ್ನು ಲಲಿತಕಲೆಗಳು ಎಂದು ಕರೆಯಲ್ಪಟ್ಟರೆ, ವೃತ್ತಿಪರವಾದ ಕಸುಬುಗಳನ್ನು ಬಿಂಬಿಸುವ ಕಮ್ಮಾರ,

ಚಮ್ಮಾರ, ಅಕ್ಕಸಾಲಿಗ, ಬಡಿಗತನ ಮುಂತಾದ ಕುಶಲಕರ್ಮಿಗಳಿಂದ ಸೃಷ್ಟಿಗೊಳ್ಳುವ ರಚನೆಗಳೆಲ್ಲವೂ ಕುಶಲಕಲೆಗಳೆಂದು ಕರೆಯಲ್ಪಡುತ್ತವೆ. ಪ್ರಸ್ತುತ ಅಧ್ಯಯನ ಮಾಡಲಿರುವ "ಚನ್ನಪಟ್ಟಣದ ಚಿತ್ತಾರದ ಗೊಂಬೆಗಳು" ಕುಶಲಕಲೆ ವ್ಯಾಪ್ತಿಗೆ ಬರುವಂತದ್ದು.

ಜನಾಂಗದ ಬದುಕು ಜೀವನ ಚರಿತ್ರೆಯೆನಿಸಿದರೆ ಕಲೆಗಳು ಅದರ ಆತ್ಮ ಚರಿತ್ರೆಯೆನಿಸುತ್ತವೆ. ವ್ಯಾಪಕವಾದ ಅರ್ಥದಲ್ಲಿ ಬದುಕಿನ ರೀತಿ ಅನುಸರಿಸಿದ ಧರ್ಮ, ಕಟ್ಟಿದಕಲೆ ಅವರ ಜೀವನ ವ್ಯವಸ್ಥೆ, ಜೀವನ ಮೌಲ್ಯ ಇತ್ಯಾದಿಗಳ ವಿವರಣೆಯೇ ಇತಿಹಾಸ ಎನಿಸುತ್ತದೆ. ಈ ಇತಿಹಾಸದ ಒಳ ಚೌಕಟ್ಟಿನಲ್ಲಿ ಬೆಳೆದು ಬಂದ ಕಲೆಗಳು ಅದಕ್ಕೆ ಸುಂದರ ಸಂಸ್ಕಾರವನ್ನು ಹೊಂದಿರುತ್ತದೆ.[೧]

ನಮ್ಮ ಗ್ರಾಮೀಣ ಜನರ ಕಲೆಗಳು ಅವರ ಬದುಕಿನೊಂದಿಗೆ ಬೆರೆತು, ಅವರ ಬದುಕಿನ ಒಂದು ಭಾಗವಾಗಿ ಬೆಳೆದು ವಿಕಾಸ ಹೊಂದುತ್ತಾ ಬಂದಿವೆ. ಅವರ ಸೌಂದರ್ಯ ಪ್ರಜ್ಞೆ, ಕಲಾವಂತಿಕೆಗಳು ಅವರ ಬದುಕಿನ ಆಚರಣೆ, ನಂಬಿಕೆಗಳೊಂದಿಗೆ ಬೆಳೆದುಬಂದಿವೆ. ಅವರು ತಮ್ಮ ಬದುಕಿನ ಪ್ರತಿಯೊಂದರಲ್ಲೂ ಕಲೆಯನ್ನು ತುಂಬಿ ತಮ್ಮ ಸೌಂದರ್ಯ ಪ್ರಜ್ಞೆಯನ್ನು ಮೆರೆದಿದ್ದಾರೆ.

'ಕಲೆ' ಒಂದು ಮುಖವಾದರೆ ಇನ್ನೊಂದು ಮುಖ ಕುಶಲಕಲೆಗಳಾಗಿ ಬೆಳವಣಿಗೆ ಹೊಂದಿವೆ. ಕರ್ನಾಟಕವು ಇಂತಹ ಕಲೆಗಳ ಆಗರವಾಗಿದೆ. ಅದರಲ್ಲೂ ನಮ್ಮ ನಾಡಿನ ಜನಪದ ಕುಶಲಕಲೆಗಳು ವಿಶೇಷವಾಗಿ ರಾಷ್ಟ್ರ ಅಂತರಾಷ್ಟ್ರೀಯ ಮಟ್ಟದ ಖ್ಯಾತಿಯನ್ನು ಪಡೆದಿವೆ. ರಾಮನಗರ ಜಿಲ್ಲೆಯ ಚನ್ನಪಟ್ಟಣ ತಾಲೂಕು ಇಂತಹ ಕುಶಲಕಲೆಗಳನ್ನು ಸಿದ್ಧಪಡಿಸುವ ಪ್ರಮುಖ ಕೇಂದ್ರವಾಗಿದೆ. ನಮ್ಮ ನಾಡಿನ ಕಲೆಯಲ್ಲಿ ಒಂದಾದ ಚನ್ನಪಟ್ಟಣ ಗೊಂಬೆ ಕಲೆಯನ್ನು ನೂರಕ್ಕೂ ಹೆಚ್ಚು ಕುಟುಂಬಗಳು ಚಿತ್ತಾರದ ಗೊಂಬೆಗಳ ಕಲಾಕೃತಿಗಳನ್ನು ನಿರ್ಮಿಸುತ್ತಿದ್ದಾರೆ. ಆಧುನಿಕ ಜಗತ್ತಿನ ಯಾಂತ್ರಿಕ ಕೈಗಾರೀಕರಣ, ವೈಜ್ಞಾನೀಕರಣದಿಂದಾಗಿ ಇಂದು ಚನ್ನಪಟ್ಟಣ ಬಣ್ಣದ ಗೊಂಬೆಗಳ ತಯಾರಿಕೆಯಲ್ಲಿ ಲೋಕ ಪ್ರಸಿದ್ಧಿಯನ್ನು ಪಡೆದಿದೆ. ಇಲ್ಲಿ ಗೊಂಬೆಗಳ ತಯಾರಿಕೆ ಒಂದು ಬೃಹತ್ ಉದ್ಯಮವಾಗಿ ಬೆಳೆದಿದ್ದು, ಸಾವಿರಾರು ಜನರಿಗೆ ಜೀವನೋಪಾಯವನ್ನು ಕಲ್ಪಿಸುವ ಸಾಧನವಾಗಿದೆ. ಚನ್ನಪಟ್ಟಣದ ಕನಿಷ್ಠ ಮೂವತ್ತು ಮನೆಗೆ ಒಂದು ಮನೆಯಂತೆ ಗೊಂಬೆಗಳನ್ನು ತಯಾರಿಸಲಾಗುತ್ತಿದ್ದು, ಸಮೀಕ್ಷೆಯ ಅಂಕಿಅಂಶದ ಪ್ರಕಾರ ಹತ್ತರಿಂದ ಹನ್ನೆರಡು ಸಾವಿರ ಕಾರ್ಮಿಕರು ಈ ಕಲೆಯನ್ನೇ ಅವಲಂಬಿಸಿ ಬದುಕು ನಡೆಸುತ್ತಿದ್ದಾರೆ. ಬೃಹತ್ ಪ್ರಮಾಣದಲ್ಲಿ ಗೊಂಬೆಗಳನ್ನು ತಯಾರಿಸುವ ನೂರಕ್ಕೂ ಹೆಚ್ಚು ಕಾರ್ಖಾನೆಗಳು ಇಲ್ಲಿ ಕಾರ್ಯನಿರತವಾಗಿವೆ. ಒಂದೊಂದು ಕಾರ್ಖಾನೆಯ ಪ್ರಮಾಣವನ್ನು ಅನುಸರಿಸಿ ಸರಾಸರಿ ಹದಿನೈದು ಜನರು ಕಾರ್ಖಾನೆಯ ವಿವಿಧ ಹಂತಗಳಲ್ಲಿ ನೌಕರಿಯನ್ನು ಪಡೆದು ಸಂತೃಪ್ತಿಯಿಂದ ಜೀವನವನ್ನು ಸಾಗಿಸುತ್ತಿದ್ದಾರೆ.

---

೧. ಡಾ. ಎಸ್.ಸಿ. ಪಾಟೀಲ, ಕರ್ನಾಟಕ ಜನಪದ ಚಿತ್ರಕಲೆ, ಪು.೩

ಅನಾದಿ ಕಾಲದಿಂದಲೂ ಮಾನವನು ತನ್ನ ಬದುಕಿಗೆ ಅಗತ್ಯವೆನಿಸಿದ ಅನೇಕ ವಸ್ತುಗಳನ್ನು ಸ್ವತಃ ತಯಾರಿಸಿ ಬಳಸುತ್ತಾ ಬಂದಿದ್ದಾನೆ. ಅಂತಹ ಉಪಯೋಗಿ ವಸ್ತುಗಳ ತಯಾರಿಕೆಯಲ್ಲಿ ತನ್ನ ಸೃಜನಶೀಲ ಮನಸ್ಸನ್ನು ದುಡಿಸಿಕೊಂಡಿದ್ದಾನೆ. ಅಲ್ಲದೆ ಅವುಗಳನ್ನು ಕಲಾತ್ಮಕವಾಗಿಯೂ ರೂಪಿಸಿಕೊಂಡಿದ್ದಾನೆ. ಮಾನವ ಕಲೆಗಾಗಿ ಕಲೆಯನ್ನು ರೂಪಿಸುವುದಕ್ಕೆ ಮೊದಲೇ ಅದನ್ನು ಬದುಕಿನ ಅವಿಭಾಜ್ಯ ಅಂಗವಾಗಿಯೇ ರೂಪಿಸಿಕೊಂಡಿದ್ದಾನೆ. ಪ್ರಜ್ಞಾಪೂರ್ವಕವಾಗಿಯೇ ಕಲೆ ದೈನಂದಿನ ವ್ಯವಹಾರಿಕ ಲೋಕದೊಳಗೆ ತಲೆ ಹಾಕಿರುವುದು ನಮ್ಮ ಅನೇಕ ಪಾರಂಪರಿಕ ಕಲೆಗಳನ್ನು ಗಮನಿಸಿದರೆ ವ್ಯತಿರಿಕ್ತವಾಗುತ್ತದೆ. ಯಂತ್ರ ನಾಗರೀಕತೆಯ ಪ್ರವೇಶ ಪೂರ್ವದಲ್ಲಿ ಮನುಷ್ಯ ತಾನೇ ನಿರ್ಮಿಸಿಕೊಂಡ ವಸ್ತುಗಳನ್ನು ತರುವಾಯದ ದಿನಗಳಲ್ಲಿ ಉಪಯೋಗದ ವಸ್ತುಗಳು ಎಂದು ಗುರುತಿಸುವುದಕ್ಕೆ ಬದಲಾಗಿ ಅವುಗಳ ಕಲಾತ್ಮಕತೆಯ ಕಡೆಗೆ ಹೆಚ್ಚು ಶ್ರದ್ಧೆಯನ್ನು ಕೇಂದ್ರೀಕರಿಸಿದ್ದಾನೆ. ಅಂದರೆ ಉಪಯೋಗಿ ವಸ್ತುಗಳ ಸ್ಥಳದಲ್ಲಿ ಪರ್ಯಾಯ ವಸ್ತುಗಳನ್ನು ತಾಂತ್ರಿಕವಾಗಿ, ವೈಜ್ಞಾನಿಕವಾಗಿ ಅಳವಡಿಸಿಕೊಳ್ಳುತ್ತಾ ಬಂದಿದ್ದರಿಂದ ಬುದ್ಧಿ ಮತ್ತು ಕೈಗಳ ಕೌಶಲ್ಯದಿಂದಲೇ ತಯಾರಾಗುತ್ತಿದ್ದ ವಸ್ತುಗಳು ಮರಗೆಲಸವು ಇಂತಹ ಅನೇಕ ಕುಶಲ ವಸ್ತುಗಳನ್ನು ಗಮನಿಸಿದರೆ ತಮ್ಮ ಪೂರ್ವಿಕರಿಗೆ ಇದ್ದ ಕಲಾ ಪ್ರಜ್ಞಾವಂತಿಕೆಯೂ ಸ್ಪಷ್ಟವಾಗುತ್ತದೆ. ದಿನ ಕಳೆದಂತೆ ಅವುಗಳ ಉಪಯೋಗದ ಕುರಿತು ವಿವರಗಳು ದೊರಯದೆ ಕಲಾತ್ಮಕವಾದ ಪ್ರದರ್ಶನ ವಸ್ತುಗಳಾಗಿ ಮಾರ್ಪಡಿಸುವ ದಿನಗಳು ದೂರವಿಲ್ಲ. ಈ ಹಿನ್ನೆಲೆಯಲ್ಲಿ ಅಕ್ಷರ ಸಂಸ್ಕೃತಿಯ ಮೂಲಕ ಇಂತಹ ಅನೇಕ ವಸ್ತುಗಳ ಕಲಾತ್ಮಕ ಹಿರಿಮೆಯ ಜೊತೆಗೆ ಅವುಗಳ ಹಿಂದಿನ ಬೌದ್ಧಿಕ ಚಿಂತನೆಯನ್ನು ಹಾಗೂ ಸಾಂಸ್ಕೃತಿಕ ಮಹತ್ವವನ್ನು ದಾಖಲು ಮಾಡಬೇಕಾದ ಕೆಲಸ ತುರ್ತು ಪ್ರಸ್ತುತ ದಿನಗಳಲ್ಲಾಗಬೇಕಿದೆ.

## ಅಧ್ಯಯನದ ಉದ್ದೇಶ

ಮಾನವನಲ್ಲಿ ಅವಿಷ್ಕಾರಗೊಂಡ ಕಲೆ ಆಂತರಿಕ ಮತ್ತು ಬಾಹ್ಯ ಬದುಕನ್ನು ಸುಂದರಗೊಳಿಸುವ ನಿಟ್ಟಿನಲ್ಲಿ ಅನೇಕ ಕವಲುಗಳಾಗಿ ವಿಂಗಡನೆಗೊಂಡಿತ್ತು. ಮೂರ್ತಿಕಲೆ, ಚಿತ್ರಕಲೆ, ವಾಸ್ತುಕಲೆ, ಸಂಗೀತ, ವಾದ್ಯ ಮುಂತಾದವುಗಳು ಆನಂದ ಕೊಡುವ ಸಾಧನಗಳಾಗಿ ರೂಪಾಂತರಗೊಂಡವು. ಮುಂದಿನ ದಿನಗಳಲ್ಲಿ ನಾಗರೀಕತೆಯ ಬದುಕಿನಿಂದಾಗಿ ಈ ಕಲಾ ಪ್ರಕಾರಗಳು ಶಿಸ್ತು ಬದ್ಧವಾದ ಮಾರ್ಗದ ಚೌಕಟ್ಟಿಗೆ ಒಳಪಟ್ಟು ಸೀಮಿತವಾದತಂಹ ಉದ್ದೇಶಗಳನ್ನು ಹೊಂದಿದವು. ಆದರೆ ಇವುಗಳ ಜೊತೆ ಜೊತೆಗೆ ಜನಪದರು ದೇಶಿ ಪರಂಪರೆಯಲ್ಲಿ ಕಲಾ ಪ್ರಕಾರಗಳನ್ನು ಅಳವಡಿಸಿಕೊಂಡು ಪ್ರತ್ಯೇಕವಾದ ಶೈಲಿಯನ್ನು ಅನುಸರಿಸಿಕೊಂಡುಬಂದರು. ಜನಪದರು ಅನುಸರಿಸಿಕೊಂಡು ಬಂದ ಕಲಾ ಪ್ರಕಾರಗಳಲ್ಲಿ ಮುಖ್ಯವಾಗಿ ಚಿತ್ರಕಲೆ, ಹಾಡುಗಾರಿಕೆ, ನೃತ್ಯ ಮುಂತಾದವುಗಳು ಒಳಗೊಳ್ಳುತ್ತದೆ. ಇವುಗಳಲ್ಲಿ ಮೂರ್ತಿ, ಶಿಲ್ಪ ಮತ್ತು ಚಿತ್ರಕಲೆಯ ಪ್ರಕಾರಗಳ ಸಂಗಮವಾದ ಗೊಂಬೆ ತಯಾರಿಕೆಯ ಜೊತೆಗೆ ಮಕ್ಕಳ ಮನೋರಂಜನಾ ಸಾಧನವಾಗಿ ಮಹತ್ವದ ಪಾತ್ರವಹಿಸುತ್ತದೆ.

ಕುಶಲಕಲೆಗಳಿಗೆ ಸಂಬಂಧಿಸಿದಂತೆ ಅದರ ಚಾರಿತ್ರಿಕ ಹಿನ್ನೆಲೆಯನ್ನು ದಾಖಲಿಸುವುದರ ಜೊತೆಗೆ ಅದರ

ಪಾರಂಪರಿಕ ಹಿರಿಮೆಯನ್ನು ಗುರುತಿಸುವುದು. ಕುಶಲಕಲೆ ಅಥವಾ ವಾಸ್ತು ಯಾವ ಉಪಯೋಗದ ಉದ್ದೇಶದಿಂದ ಹುಟ್ಟಿಕೊಂಡಿದೆ ಎನ್ನುವುದನ್ನು ವ್ಯಕ್ತಪಡಿಸುವುದು ಅಲ್ಲದೆ ಬಹುಪಯೋಗಿ ಸಾಧ್ಯತೆಗಳನ್ನು ಕೂಡಿ ತಿಳಿಸುವುದು. ಕಲಾ ಪರಂಪರೆಯನ್ನು ಮುಂದಿನ ತಲೆಮಾರುಗಳ ಅರಿವಿಗಾಗಿ ಕಾಯ್ದಿಡಬೇಕು ಎಂಬ ಉದ್ದೇಶದಿಂದ ಹಾಗೂ ಆಧುನಿಕತೆಯು ಪರಿಣಾಮವಾಗಿ ಸಾಂಸ್ಕೃತಿಕ ಕಲಾ ಪರಂಪರೆಗಳು ಬಹಳ ಬೇಗ ಕಣ್ಮರೆಯಾಗುವಂತಹ ಸ್ಥಿತಿ ಉದ್ಭವಿಸಬಹುದು ಎಂಬ ಉದ್ದೇಶದಿಂದ ಈ ಕಲಾ ಪರಂಪರೆಯನ್ನು ಮುಂದಿನ ತಲೆಮಾರುಗಳಿಗೆ ಕಾಯ್ದಿಡಬೇಕು ಮತ್ತು ಕಲಾ ಸಂಸ್ಕೃತಿಯ ಪರಂಪರೆಯ ಬಗ್ಗೆ ನಮ್ಮ ಅಸಡ್ಡೆ, ಅಜ್ಞಾನ, ಅಂಧಶ್ರದ್ಧೆಗಳ ಫಲವಾಗಿ ಅಮೂಲ್ಯವಾದ ಕಲಾ ಸಂಪತ್ತು ವಿಶೇಷಗಳು ನಮ್ಮ ಕೈಗೆ ಎಟಕದಂತಾಗುತ್ತದೆ. ಅವುಗಳನ್ನು ಸಂರಕ್ಷಿಸಬೇಕು ಎಂಬ ಉದ್ದೇಶದಿಂದ ಹುಟ್ಟಿದ ಕುಶಲಕಲೆಗಳು ಕೇವಲ ಅನಕ್ಷರಸ್ಥರ, ಬುಡಕಟ್ಟು ಜನರ ಅವಿದ್ಯಾವಂತರ, ಗ್ರಾಮೀಣ ಜನರಿಗೆ ಸಂಬಂಧಿಸಿದ ಚಟುವಟಿಕೆಗಳು ಎಂಬುದಾಗಿದೆ.

ಗೊಂಬೆ ತಯಾರಿಕೆಯಲ್ಲಿ ಹಲವಾರು ಪ್ರಕಾರಗಳಿದ್ದು ತೊಗಲುಗೊಂಬೆ, ಸೂತ್ರದಗೊಂಬೆ, ಕಟ್ಟಿದ ಗೊಂಬೆ ಮತ್ತು ಕಟ್ಟಿಗೆಗೊಂಬೆ ಹಲವು ಗೊಂಬೆಗಳ ತಯಾರಿಕೆಯು ಕರ್ನಾಟಕದ ವಿವಿಧ ಪ್ರದೇಶಗಳಲ್ಲಿ ಪ್ರಖ್ಯಾತಗೊಂಡಿವೆ. ಅವುಗಳಲ್ಲಿ ರಾಮನಗರ ಜಿಲ್ಲೆಯ ಚನ್ನಪಟ್ಟಣವು ಚಿತ್ತಾರದ ಗೊಂಬೆಗಳಿಗೆ ನಾಡಿನಾದ್ಯಂತ ಪ್ರಸಿದ್ಧಿಯನ್ನು ಪಡೆದಿದ್ದು ಅವುಗಳ ಬಗ್ಗೆ ಅಧ್ಯಯನ ಮಾಡುವ ಉದ್ದೇಶವನ್ನು ಇಲ್ಲಿ ಹೊಂದಲಾಗಿದೆ.

ಚನ್ನಪಟ್ಟಣವು ಬಣ್ಣದ ಗೊಂಬೆಯ ತಯಾರಿಕೆಯಲ್ಲಿ ರಾಷ್ಟ್ರ ಮತ್ತು ಅಂತರಾಷ್ಟ್ರೀಯ ಮಟ್ಟದಲ್ಲಿ ಪ್ರಸಿದ್ಧಿಯನ್ನು ಪಡೆದಿದೆ. ಇಲ್ಲಿ ಗೊಂಬೆಗಳ ತಯಾರಿಕೆ ಒಂದು ಬೃಹತ್ ಉದ್ಯಮವಾಗಿ ಬೆಳೆದಿದ್ದು ಸಾವಿರಾರು ಜನರಿಗೆ ಜೀವನೋಪಾಯವನ್ನು ಕಲ್ಪಿಸಿದೆ. ಈ ಊರಿನಲ್ಲಿ ಬಹುಮಟ್ಟಿನ ಕುಟುಂಬಗಳು ಗೊಂಬೆ ತಯಾರಿಕೆಯಲ್ಲಿ ತೊಡಗಿಕೊಂಡಿವೆ. ಒಂದು ಅಂದಾಜಿನ ಪ್ರಕಾರ ೧೦ ರಿಂದ ೧೫ ಸಾವಿರ ಕಾರ್ಮಿಕರು ಈ ಕಲೆಯನ್ನು ಅವಲಂಬಿಸಿ ಬದುಕು ನಡೆಸುತ್ತಿದ್ದಾರೆ. ಅಲ್ಲದೆ ಗೊಂಬೆಗಳನ್ನು ತಯಾರಿಸುವ ನೂರಕ್ಕೂ ಹೆಚ್ಚು ಕಾರ್ಖಾನೆಗಳು ಇಂದಿಗೂ ಕಾರ್ಯನಿರ್ವಹಿಸುತ್ತಿವೆ. ಚನ್ನಪಟ್ಟಣದ ಆಟಿಕೆಗಳ ತಯಾರಿಯಂತೂ ಭಾರತದ ಕೈಗಾರಿಕಾ ಭೂಪಟದಲ್ಲೇ ವೈಶಿಷ್ಟ್ಯ ಪೂರ್ಣವಾದ ಸ್ಥಾನವನ್ನು ಪಡೆದುಕೊಂಡಿದೆ ಎಂದು ಹೇಳಿದರೆ ಉತ್ಪ್ರೇಕ್ಷೆಯಾಗಲಾದರು. ಬೇಡಿಕೆ ಮೇರೆಗೆ ತಯಾರಿಸುವ ವಿಶಿಷ್ಟವಾದ ಆಟದ ಸಾಮಾನುಗಳು ಅಮೆರಿಕಾ, ಜಪಾನ್, ಸಿಂಗಾಪುರಗಳಿಗೆ ಚನ್ನಪಟ್ಟಣದಿಂದ ಸರಬರಾಜು ಆಗುತ್ತಿದೆ. ಒಂದು ಕಾಲದಲ್ಲಿ ಮಕ್ಕಳ ಆಟಿಕೆಗಳಿಗೆ ಸೀಮಿತವಾಗಿದ್ದ ಈ ಕುಶಲಕಲೆ ಇಂದು ಹೊಸ ನಮೂನೆಯ ಉಡುಗೊರೆ ವಸ್ತುಗಳಾಗಿ ರೂಪಾಂತರ ಹೊಂದಿದ್ದರೂ ಇವುಗಳ ಮಧ್ಯೆ ಹಳೆಯ ಪರಂಪರೆಯ ಕುರುಹಾಗಿ ಭರಣಿ, ಹೂದಾನಿ ಆಟಿಕೆಗಲೂ ಕಂಡುಬರುತ್ತವೇ. ಮತ್ತು ಪ್ರಾಚೀನ ಪರಂಪರೆಯನ್ನು ಹೊಂದಿದ ಸುಂದರವಾದ ಬಣ್ಣಗಳಿಂದ ಕೂಡಿದ ಈ ಚಿತ್ತಾರದ ಗೊಂಬೆಗಳು ಕೇವಲ ಪ್ರಯೋಜನದ ದೃಷ್ಟಿಯಿಂದ ಮಾತ್ರ ಮಹತ್ವ ಪಡೆದುಕೊಂಡಿರದೆ, ಕಲಾತ್ಮಕ ದೃಷ್ಟಿಕೋನದಿಂದಲೂ ಸಹ ಪ್ರಾಮುಖ್ಯತೆ ಪಡೆದುಕೊಂಡಿವೆ. ಅವುಗಳ ರಚನಾ ಪರಿಕರಗಳು, ಸಿದ್ಧತಾ ವಿಧಿ

ವಿಧಾನಗಳು ವಸ್ತು ವಿಷಯ ಕಲಾವಿದರ ಸ್ಥಿತಿಗತಿಗಳ ಕುರಿತು ಇವುಗಳ ಬಗ್ಗೆ ಇದುವರೆಗೂ ಕಲಾತ್ಮಕ ಹಿನ್ನೆಲೆಯಲ್ಲಿ ಯಾವುದೇ ರೀತಿಯ ಗಂಭೀರ ಅಧ್ಯಯನಗಳು ನಡೆಯದೆ ಇರುವುದನ್ನು ಪರಿಗಣಿಸಿ ಪ್ರಸ್ತುತ ಅಧ್ಯಯನವನ್ನು ಕೈಗೊಳ್ಳಲು ಉದ್ದೇಶಿಸಿ ಅಧ್ಯಯನ ನಡೆಸಿದೆ.

**ಚಿತ್ರಕಲಾ ಕ್ಷೇತ್ರದಲ್ಲಿ ಇದುವರೆಗೆ ನಡೆದ ಅಧ್ಯಯನಗಳು**

ಕರ್ನಾಟಕ ಸಂದರ್ಭದ ಚಿತ್ರಕಲಾ ಕ್ಷೇತ್ರದಲ್ಲಿ ಹೆಚ್ಚಿನ ಸಂಶೋಧನಾ ಅಧ್ಯಯನಗಳು ನಡೆದಿಲ್ಲವೆಂದೇ ಹೇಳಬಹುದಾಗಿದೆ. ಏಕೆಂದರೆ ವಿಶ್ವವಿದ್ಯಾಲಯ ಮಟ್ಟದಲ್ಲಿ ಚಿತ್ರಕಲೆಗಳ ಕುರಿತಾದ ಅಧ್ಯಯನಕ್ಕೆ ಅವಕಾಶ ದೊರಕಿದ್ದು ತೀರ ಇತ್ತೀಚಿಗಷ್ಟೆ. ೮೦ರ ದಶಕದಲ್ಲಿ ಈ ಅಧ್ಯಯನಗಳು ತೀವ್ರಗೊಂಡು ಈಗಷ್ಟೇ ತನ್ನ ಶೈಶಾವಸ್ಥೆಯನ್ನು ಕಳೆದು ಯೌವ್ವನಕ್ಕೆ ಕಾಲಿಡುತ್ತಿದೆ. ೧೯೮೦ರ ದಶಕದಿಂದ ಕರ್ನಾಟಕದ ದೃಶ್ಯಕಲಾ ಕ್ಷೇತ್ರದಲ್ಲಿ ಮೊದಲಬಾರಿಗೆ ವಿಶ್ವವಿದ್ಯಾಲಯ ಮಟ್ಟದಲ್ಲಿ ಚಿತ್ರಕಲೆಯ ಕುರಿತು ಸಂಶೋಧನಾತ್ಮಕ ಅಧ್ಯಯನಗಳು ಪ್ರಾರಂಭಗೊಂಡಿರುವುದು ಕಾಣಸಿಗುತ್ತದೆ.

ಪಿಎಚ್.ಡಿ. ಎಂ.ಫಿಲ್, ಸ್ನಾತಕೋತ್ತರ, ಅಧ್ಯಯನಗಳಾಗಿ ಸಲ್ಲಿಸಿರುವ ಪ್ರಬಂಧಗಳು, ಸಂಪ್ರಬಂಧಗಳು, ಕಿರುಪ್ರಬಂಧಗಳನ್ನು ಈ ಕೆಳಗಿನಂತೆ ಕಾಣಬಹುದು.

೧. ಮಾಧ್ಯಮಿಕ ಕಲಾ ಶಿಕ್ಷಣದಲ್ಲಿ ಚಿತ್ರಕಲಾ ಶಿಕ್ಷಣ ಒಂದು ಅಧ್ಯಯನ ೧೯೮೩, ಡಾ. ಎಸ್.ಸಿ. ಪಾಟೀಲರ ಅಪ್ರಕಟಿತವಾದ ಸಂಶೋಧನಾ ಕಿರು ಪ್ರಬಂಧ, ಕರ್ನಾಟಕ ವಿಶ್ವವಿದ್ಯಾಲಯದ ಸ್ನಾತಕೋತ್ತರ ಶಿಕ್ಷಣ ವಿಭಾಗ, ಧಾರವಾಡ.

೨. ಕರ್ನಾಟಕ ಜನಪದ ಚಿತ್ರಕಲೆ, ೧೯೯೧, ಡಾ. ಎಸ್.ಸಿ. ಪಾಟೀಲ, ಪಿಎಚ್.ಡಿ. ಮಹಾಪ್ರಬಂಧ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೩. ಕರ್ನಾಟಕದ ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಅಂಶಗಳು, ೧೯೯೫, ಡಾ. ಅ.ಲ.ನರಸಿಂಹನ್, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೪. ಹಿಂದೂಸ್ಥಾನಿ ಸಂಗೀತ ಹಾಗೂ ರಾಗಾಮಾಲ ಚಿತ್ರಗಳು, ೧೯೯೭, ಡಾ. ಸಂಪದಾಭಟ್, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೫. ಅನಿವಾಸಿ ಭಾರತೀಯ ಕಲಾವಿದ ದಿ.ನಿಕೋಲಸ್ ರೋರೊಕ್ ಜೀವನ ಮತ್ತು ಕಲಾಕೃತಿಗಳು, ೧೯೯೭, ಡಾ. ಪುಷ್ಪ ದ್ರಾವಿಡ, ಅಪ್ರಕಟಿತ ಪಿಎಚ್.ಡಿ.ಮಹಾಪ್ರಬಂಧ, ಬೆಂಗಳೂರು ವಿಶ್ವ ವಿದ್ಯಾಲಯ, ಬೆಂಗಳೂರು.

೬. ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆ: ಒಂದು ಅಧ್ಯಯನ, ೨೦೦೧, ಡಾ. ಯಾದಪ್ಪ ಪರದೇಶಿ.

೭. ಕರ್ನಾಟಕದ ಜನಪದ ಶಿಲ್ಪಕಲೆ: ಒಂದು ಅಧ್ಯಯನ, ೨೦೦೨, ಡಾ. ಶಿವಾನಂದ ಬಂಟನೂರು, ಅಪ್ರಕಟಿತ ಪಿಎಚ್.ಡಿ.ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೮. ಬುಡಕಟ್ಟು ಚಿತ್ರಕಲೆ, ೨೦೦೨ ಡಾ. ಗೀರಿಶ್, ಅಪ್ರಕಟಿತ ಪಿಎಚ್.ಡಿ.ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೯. ಕಲಾವಿದ ಎಂ.ಎ. ಚೆಟ್ಟಿಯವರ ಜೀವನ, ಕಲಾಕೃತಿಗಳು : ಒಂದು ಅಧ್ಯಯನ, ೨೦೦೨, ಡಾ. ಲಕ್ಷ್ಮಿದೇವಿ ಗವಾಯಿ, ಪಿಎಚ್.ಡಿ.ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೦. ಕೊಪ್ಪಳ-ಹಂಪಿ ಪ್ರದೇಶದ ಪ್ರಾಗೈತಿಹಾಸಿಕ ಕಾಲದ ಕಲೆ, ೨೦೦೨, ಶರಣಪ್ಪ ಕೋಲ್ಕಾರ, ಅಪ್ರಕಟಿತ ಪಿಎಚ್.ಡಿ.ಮಹಾಪ್ರಬಂಧ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೧೧. ಕಲಾವಿದ ಆರ್.ಎಂ. ಹಡಪದ : ಒಂದು ಅಧ್ಯಯನ, ೨೦೦೩, ಡಾ. ಸಿದ್ಧಲಿಂಗಸ್ವಾಮಿ ಹಿರೇಮಠ, ಪಿಎಚ್.ಡಿ.ಮಹಾಪ್ರಬಂಧ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೧೨. ಕರ್ನಾಟಕ ತೊಗಲುಗೊಂಬೆ ಚಿತ್ರಕಲೆ, ೨೦೦೫, ಡಾ. ಶಶಿಕಲಾ ಹೂಗಾರ, ಅಪ್ರಕಟಿತ ಪಿಎಚ್.ಡಿ.ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೩. ಕರ್ನಾಟಕ ಹಸ್ತಪ್ರತಿ ಚಿತ್ರಕಲೆ, ೨೦೦೫, ಎಚ್.ಎಸ್. ಚಿತ್ರಗಾರ, ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೪. ರಂಗೋಲಿ ಚಿತ್ರಕಲೆ ಸಾಂಸ್ಕೃತಿಕ ಅಧ್ಯಯನ, ೨೦೦೬, ಡಾ. ವಿಶ್ವೇಶ್ವರಿ ತಿವಾರಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ., ಅಪ್ರಕಟಿತ ಪಿಎಚ್.ಡಿ.ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೫. ಸುರಪೂರ ಶೈಲಿ ಚಿತ್ರಕಲೆ : ಒಂದು ಅಧ್ಯಯನ, ೨೦೦೭, ಮಲ್ಲಿಕಾರ್ಜುನ ಬಾಗೋಡಿ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.

೧೬. ದಕ್ಷಿಣ ಕರ್ನಾಟಕದ ಜನಪದ ಶಿಲ್ಪಕಲೆ, ಡಾ. ಜಿ. ಲಕ್ಷ್ಮಿಪತಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮

೧೭. ವಿ.ಬಿ. ಹಿರೇಗೌಡರ ಕಲೆ ಮತ್ತು ಬದುಕು, ಡಾ. ರವೀಂದ್ರ ಕಮ್ಮಾರ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮

೧೮. ಕಲಾವಿದ ಧನಂಜಯ ಶಿಲ್ಪಿಯವರ ಜೀವನ ಮತ್ತು ಕಲೆ, ಡಾ. ಸೂರ್ಯಕಾಂತ ಮಂಟಗಿ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೯

೧೯. ಕರ್ನಾಟಕದ ಬಿದರಿಕಲೆ, ಡಾ. ರಹೆಮಾನ ಪಾಟೀಲ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೯

೨೦. ದಕ್ಷಿಣ ಕರ್ನಾಟಕದ ಜನಪದ ಶಿಲ್ಪಕಲೆ, ಡಾ. ಜಿ. ಲಕ್ಷ್ಮೀಪತಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯

೨೧. ಕಲಾವಿದ ಧನಂಜಯ ಶಿಲ್ಪಿಯವರ ಜೀವನ ಮತ್ತು ಕಲೆ : ಒಂದು ಅಧ್ಯಯನ, ಡಾ. ಸೂರ್ಯಕಾಂತ ಮಂಟಗಿಯವರ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೯

೨೨. ಕರ್ನಾಟಕದ ಬಿದ್ರಿ ಕಲೆ : ಒಂದು ಅಧಯಯನ, (ಬೀದರ ಜಿಲ್ಲೆಯನ್ನು ಅನುಲಕ್ಷಿಸಿ) ಡಾ. ರೆಹಮಾನ ಪಟೇಲ್, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೯

೨೩. ವಿಜಯ ಸಿಂಧೂರ ಅವರ ಕಲಾಕೃತಿಗಳ ಒಳನೋಟಗಳು, ಶ್ರೀಮತಿ ಸುನಿತಾ ಪಾಟೀಲ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦

೨೪. ಕರ್ನಾಟಕದ ಗಾಜಿನ ಮೇಲಿನ ಚಿತ್ರಗಳು : ಒಂದು ಅಧ್ಯಯನ, ನಿಂಗಪ್ಪ ಎಂ. ಅಂಗಡಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦

೨೫. ಕಲಾವಿದ ಎಂ.ಬಿ. ಪಾಟೀಲ ಜೀವನ ಮತ್ತು ಕಲಾಕೃತಿಗಳು : ಒಂದು ಅಧ್ಯಯನ, ಸಣ್ಣಮದಗಪ್ಪ ಎಸ್. ಗಡ್ಡಿಯವರ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦

ಈ ಮೇಲಿನ ಎಲ್ಲ ಮಹಾಪ್ರಬಂಧಗಳು ಚಿತ್ರಕಲೆಯ ಕುರಿತಾದ ಪಿಎಚ್.ಡಿ ಮಹಾಪ್ರಬಂಧಗಳಾಗಿವೆ.

೧. ಚಿತ್ರಕಲಾವಿದ ಜೆ.ಎಸ್. ಖಂಡೇರಾವ್ : ಒಂದು ಅಧ್ಯಯನ, ೨೦೦೨ ಮಲ್ಲಿಕಾರ್ಜುನ ಬಾಗೋಡಿ, ಅಪ್ರಕಟಿತ ಎಂ.ಫಿಲ್. ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨. ಯಕ್ಷಗಾನ ದೃಶ್ಯಕಲೆಯ ಮುಖವರ್ಣಿಕೆ ಮತ್ತು ವೇಷಭೂಷಣ, ೨೦೦೩, ಎ.ಎಸ್. ವಿಶ್ವನಾಥ, ಅಪ್ರಕಟಿತ ಎಂ.ಫಿಲ್. ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩. ಚಿತ್ರಕಲಾವಿದ ಡಿ.ವಿ. ಹಾಲಭಾವಿಯವರ ಬದುಕು ಮತ್ತು ಕಲಾಕೃತಿಗಳು, ೨೦೦೫, ಶಂಕರ ಕುಂದಗೋಳ, ಎಂ.ಫಿಲ್. ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪. ಚಿತ್ರಕಲಾವಿದ ಎಂ.ವಿ. ಮಿನಜಿಗಿಯವರ ಬದುಕು ಮತ್ತು ಕಲಾಕೃತಿಗಳು, ೨೦೦೫, ಸಿ.ಡಿ. ಜಟ್ಟೆಣ್ಣವರ, ಅಪ್ರಕಟಿತ ಎಂ.ಫಿಲ್. ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫. ವಿಜಯನಗರ ಭಿತ್ತಿ ಚಿತ್ರಕಲೆ, ೨೦೦೬, ಸುಚಿತ್ರಾ ಲಿಂಗದಳ್ಳಿ, ಅಪ್ರಕಟಿತ ಎಂ.ಫಿಲ್. ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬. ಕಿನ್ನಾಳದ ಕಲೆ, ೨೦೦೬, ರವಿನಾಯ್ಕ್, ಅಪ್ರಕಟಿತ ಎಂ.ಫಿಲ್. ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೭. ಜೈನ ಚಿತ್ರಕಲೆ, ೨೦೦೭, ಉಮೇಶ, ಅಪ್ರಕಟಿತ ಎಂ.ಫಿಲ್. ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೮. ನಿಷ್ಪ್ರಾಣಿವಾಡೆ ಭಿತ್ತಿ ಚಿತ್ರಕಲೆ, ೨೦೦೭, ಬಿ.ಎಂ. ಪಾಟೀಲ

೯. ಶೈಲ ಬರಡೊಲ ಅವರು ಸಂತಸುಬ್ಬರಾಯ ಜೀವನ ಕಲಾಕೃತಿ.

೧೦. ಕೃಷ್ಣೇಗೌಡ ಎಚ್.ಎನ್. ಅವರು ೨೦೦೮ರಲ್ಲಿ ಕರ್ನಾಟಕದಲ್ಲಿ ಟಿಬೇಟಿಯನ್ ಚಿತ್ರಕಲೆ.

೧೧. ಗಿರಿಜಾ ಎಸ್. ಬಿರಾದಾರ ಬಿಜಾಪುರ ಜಿಲ್ಲೆಯ ಚಿತ್ರಕಲೆ.

೧೨. ಮಹಾಕೂಟೇಶ್ವರ ಪಾಟೀಲ ಅವರ ಬೆಳಗಾವಿ ಜಿಲ್ಲೆಯ ಚಿತ್ರಕಲೆ.

೧೩. ಬಸವರಾಜ ಗವಿಮಠ ಅವರು ಬಾಗಲಕೋಟೆ ಜಿಲ್ಲೆಯ ಚಿತ್ರಕಲೆ.

೧೪. ಕೃಷ್ಣವೇಣಿ ಅವರು ಬಳ್ಳಾರಿ ಜಿಲ್ಲೆಯ ಪ್ರಾಗೈತಿಹಾಸಿಕ ಚಿತ್ರಕಲೆ.

೧೫. ಮಹಾಂತೇಶ ಫಲದನ್ನಿ ಅವರು ಲಜ್ಜಾಗೌರಿ ಶಿಲ್ಪಕಲೆ ಒಂದು ಅಧ್ಯಯನ.

೧೬. ಸಂತೋಷ ಕುಲಕರ್ಣಿ ಅವರು ದಾವಣಗೆರೆ ಜಿಲ್ಲೆಯ ಚಿತ್ರಕಲೆ.

೧೭. ಜೈರಾಜ್ ಚಿಕ್ಕಪಾಟೀಲ ಅವರು ಕರ್ನಾಟಕದಲ್ಲಿ ಜಾಹಿರಾತುಗಳ ಸಾಂಸ್ಕೃತಿ ಅಧ್ಯಯನ.

೧೮. ಮಹೇಶ ಉಮತಾರ ಅಪರ ಬಿ.ಪಿ. ಬಾಯಿರಿ ಅವರ ಕಲಾಬದುಕು.

೧೯. ಸುರೇಶ ಎಸ್. ಬಡಿಗೇರ, ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿ ಚಿತ್ರಕಲೆ ಒಂದು ಅಧ್ಯಯನ.

೨೦. ಯೋಗಿಶ್ ಹೆಚ್., ಅವರು ಚಿತ್ರದುರ್ಗ ಜಿಲ್ಲೆಯ ಚಿತ್ರಕಲೆ.

೨೧. ಶಾಮಜಮದಾರ, ಕಲಾವಿದ ಸಿ.ಎಸ್. ಪಾಟೀಲ ಕಲೆ ಮತ್ತು ಬದುಕು ಅಧ್ಯಯನ.

೨೨. ಕಾಂತರಾಜು, ತುಮಕೂರು ಜಿಲ್ಲೆಯ ಭಿತ್ತಿ ಚಿತ್ರಕಲೆ.

೨೩. ವಿಶ್ವನಾಥ, ಚಿತ್ರದುರ್ಗ ಜಿಲ್ಲೆಯ ಪ್ರಾಗೈತಿಹಾಸಿಕ ಕಲೆ ಒಂದು ಅಧ್ಯಯನ.

೨೪. ರಂಗಸ್ವಾಮಿ, ಕಲಾವಿದ ರುಮಾಲೆ ಚನ್ನಬಸವಯ್ಯ ಜೀವನ ಮತ್ತು ಕಲಾಕೃತಿಗಳು.

ಈ ಮೇಲಿನ ಎಲ್ಲ ಸಂಪ್ರಬಂಧಗಳು ಚಿತ್ರಕಲೆಯ ಕುರಿತಾದ ಎಂ.ಫಿಲ್. ಸಂಪ್ರಬಂಧಗಳಾಗಿವೆ. ಹೀಗೆ ಬೆಂಗಳೂರು, ಗುಲಬರ್ಗಾ, ಕರ್ನಾಟಕ ವಿಶ್ವವಿದ್ಯಾಲಯ ಮತ್ತು ಕನ್ನಡ ವಿಶ್ವವಿದ್ಯಾಲಯಗಳಲ್ಲಿ ಪಿಎಚ್.ಡಿ. ಅಧ್ಯಯನಕ್ಕಾಗಿ ಸರಿ ಸುಮಾರು ೨೫ಕ್ಕೂ ಹೆಚ್ಚು ಸಂಶೋಧನಾ ಪ್ರಬಂಧಗಳು ರಚನೆಯಾಗಿದೆ. ಇದೇ ರೀತಿ ೧೫ಕ್ಕೂ ಹೆಚ್ಚು ವಿದ್ಯಾರ್ಥಿಗಳು ಅಧ್ಯಯನ ನಿರತರಾಗಿದ್ದಾರೆ. ಇದಲ್ಲದೆ ವಿಶ್ವವಿದ್ಯಾಲಯಗಳ ಡಿಪ್ಲೊಮಾ ಪದವಿ ಅಂತಿಮ ವರ್ಷಕ್ಕೆ ಸಿದ್ಧಪಡಿಸುವ ಕಿರು ಯೋಜನಾ ವರದಿಗಳು, ಬಿ.ವಿ.ಎ. ಮತ್ತು ಬಿ.ಎಫ್.ಎ., ಬಿ.ವಿ.ಇಡಿ., ಪದವಿ ಹಾಗೂ ಎಂ.ವಿ.ಎ. ಮತ್ತು ಎಂ.ಎಫ್.ಎ. ಸ್ನಾತಕೋತ್ತರ ಹಂತದಲ್ಲಿ ಸುಮಾರು ೪೦೦ಕ್ಕೂ ಹೆಚ್ಚಿನ ಲಘುಶೋಧ ಪ್ರಬಂಧಗಳು ರಚನೆಗೊಂಡಿರುತ್ತವೆ. ಪದವಿ ತರಗತಿಗಳಿಗೆ ಅಧ್ಯಯನದ ಭಾಗವಾಗಿ ಕಿರು ಸಂಶೋಧನಾ ಪ್ರಬಂಧಗಳು ರಚನೆಯಾಗಿದ್ದು, ಸಂಶೋಧನಾ ಅಧ್ಯಯನವು ಕಲಾಕ್ಷೇತ್ರದಲ್ಲಿ ಅನಿವಾರ್ಯವಾದ ಅಧ್ಯಯನವಾಗಿ ಬೆಳೆಯುತ್ತಿದೆ. ಪ್ರಸ್ತುತವಾಗಿ ಈ ಕ್ಷೇತ್ರದಲ್ಲಿ ಸಂಶೋಧನೆಗಳು ತೀವ್ರವಾಗಿ

ಮುನ್ನಡೆಯುತ್ತಿಲಿದ್ದು ಭವಿಷ್ಯದ ಮುಖ್ಯವಾಹಿನಿಯಲ್ಲಿ ಕಲಾ ಕ್ಷೇತ್ರವು ಸಂಶೋಧನಾತ್ಮಕವಾಗಿಯೂ ಇನ್ನಷ್ಟು ಬಲಗೊಳ್ಳುವ ಆಶಯವನ್ನು ಕಾಣಬಹುದು.

**ವ್ಯಾಪ್ತಿ**

ಪ್ರಸ್ತುತ ಅಧ್ಯಯನವು ಚನ್ನಪಟ್ಟಣದ ಚಿತ್ತಾರದ ಗೊಂಬೆಗಳ ಕುರಿತಾಗಿದ್ದು, ಈ ಅಧ್ಯಯನದ ಹರವು ವ್ಯಾಪಕವಾಗಿದೆ. ಚನ್ನಪಟ್ಟಣದ ಗೊಂಬೆಗಳು ರಾಜ್ಯ ಮತ್ತು ರಾಷ್ಟ್ರ, ಅಂತರ್ ರಾಷ್ಟ್ರೀಯ ಮಟ್ಟದಲ್ಲಿ ಹಲವಾರು ಕಡೆಗೆ ಸಂಗ್ರಹಗೊಂಡಿದೆ. ಅವೆಲ್ಲವುಗಳನ್ನು ಈ ಅಧ್ಯಯನದ ವ್ಯಾಪ್ತಿಗೆ ತಂದುಕೊಳ್ಳಲು ಸಾಧ್ಯವಾಗಿಲ್ಲ.ಈ ಗೊಂಬೆಗಳ ರಚನಾ ಪರಂಪರೆಯು ಅತ್ಯಂತ ಪ್ರಾಚೀನ ಕಾಲದಿಂದ ತೊಡಗಿಕೊಂಡಿದ್ದರು. ಈ ಅಧ್ಯಯನದಲ್ಲಿ ಇಂದಿನ ಸದ್ಯದ ಸಂದರ್ಭವನ್ನು ಮಾತ್ರ ಪರಿಗಣಿಸಲಾಗಿದೆ. ಅಲ್ಲದೇ ಅಧ್ಯಯನದ ಸೀಮಿತ ವ್ಯಾಪ್ತಿ ಹಾಗೂ ಚೌಕಟ್ಟಿನಿಂದಾಗಿ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಲಭ್ಯವಾದ ಕಲಾಕೃತಿಗಳು ಮತ್ತು ಕಲಾವಿದರನ್ನು ಮಾತ್ರ ಅಧ್ಯಯನಕ್ಕೆ ಬಳಸಿಕೊಳ್ಳುವ ಮೂಲಕ ಅಧ್ಯಯನಕ್ಕೆ ಒಂದು ವ್ಯಾಪ್ತಿಯನ್ನು ಅಳವಡಿಸಿಕೊಳ್ಳಲಾಗಿದೆ.

**ಚನ್ನಪಟ್ಟಣದ ಚಿತ್ತಾರದ ಗೊಂಬೆಗಳ ಕುರಿತು ನಡೆದ ಅಧ್ಯಯನದ ಸಮೀಕ್ಷೆ**

* **ಕಲಾ ಪ್ರಪಂಚ**, ಶಿವರಾಮ ಕಾರಂತ, ವ್ಯಾಸಂಗ ಮತ್ತು ವಿಸ್ತರಣ ಪ್ರಕಟಣ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೮
* **ಮೈಸೂರು ರಾಜ್ಯದಲ್ಲಿ ವಾಣಿಜ್ಯ ಮತ್ತು ಕರಕುಶಲ ಕಲೆಗಳು**, ಅಕ್ಷರ ಪ್ರಕಾಶನ ಹೆಗ್ಗೋಡು, ಅಕ್ಷರ ಪ್ರಕಾಶನ ಹೆಗ್ಗೋಡು, ೧೮೦೦-೧೯೯೧
* **ರಾಮನಗರ ತಾಲೂಕಿನ ಪುರಾತತ್ವ ಅವಶೇಷಗಳು**, ಡಾ. ಎಂ. ಭೈರೆಗೌಡ
* **ರಾಮನಗರ ತಾಲೂಕಿನ ಪುರಾತತ್ವ ಅವಶೇಷಗಳು**, ಇತಿಹಾಸದರ್ಶನ ಸಂಪುಟ ೧೭, ೨೦೦೨
* **ಇತಿಹಾಸ ದರ್ಶನ ಸಂಪುಟ-೧೪**, ಬೆಂಗಳೂರು ಮತ್ತು ಕೊಡುಗು ಜಿಲ್ಲೆ, ೧೯೯೯
* **ಇತಿಹಾಸ ದರ್ಶನ ಸಂಪುಟ-೧೭**, ಬೆಂಗಳೂರು ಮತ್ತು ಕೊಡುಗು ಜಿಲ್ಲೆ, ೨೦೦೨
* **ಇತಿಹಾಸ ದರ್ಶನ ಸಂಪುಟ-೧೯**, ಡಾ. ಚನ್ನಕ್ಕಪಾಟಿ,ಬೆಂಗಳೂರು ಮತ್ತು ಕೊಡುಗು ಜಿಲ್ಲೆ, ೨೦೦೪
* **ಕರ್ನಾಟಕ ಕನ್ನಡ ವಿಶ್ವಕೋಶ**, (ಸಂ.) ಎಂ. ಭೈರೆಗೌಡ, ತಾ.ಸಿ. ತಿಮ್ಮಯ್ಯ, ಅಖಿಲ ಭಾರತ ೭೭ನೇ ಕನ್ನಡ ಸಾಹಿತ್ಯ ಸಮ್ಮೇಳನ ಕನಕಪುರ, ಅರ್ಕಾವತಿ ಸ್ಮರಣ ಸಂಚಿಕೆ
* **ಕರ್ನಾಟಕದ ಕರಕುಶಲ ಕಲೆಗಳು**, ಬಿ.ಎಂ. ಚಂದ್ರಶೇಖರಯ್ಯ, ಐ.ಬಿ.ಎಚ್. ಪ್ರಕಾಶನ, ಬೆಂಗಳೂರು, ೧೯೮೩

* ದಕ್ಷಿಣ ಕರ್ನಾಟಕದ ಜನಪದ ಶಿಲ್ಪಕಲೆ, ಜಿ. ಲಕ್ಷ್ಮೀಪತಿ, ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೯

* ಕರಕುಶಲ ಕಲೆಗಳು, (ಸಂ.) ಡಾ. ಕರೀಗೌಡ ಬೀಚನಹಳ್ಳಿ, ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ

* ಚನ್ನಪಟ್ಟಣದ ಚಿತ್ತಾರದ ಗೊಂಬೆಗಳು, ಶಶಿಕಲಾ ಜಿ.ವಿ., ಎಂ.ವಿ.ಎ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯ, ಹಂಪಿ

* ಎಫಿಗ್ರಾಫಿ ಕರ್ನಾಟಕ ಸಂ-೯ ಚನ್ನಪಟ್ಟಣ ಲೇಖನ

* ಚನ್ನಪಟ್ಟಣ ತಾಲೂಕು ಗ್ರಾಮದೇವತೆಗಳ ಸಮಾಜೋ ಸಾಂಸ್ಕೃತಿಕ ಅಧ್ಯಯನ, ಡಾ. ಕೆ.ಸಿ.ರಂಗಸ್ವಾಮಿ, ೨೦೦೭

* ಕಸ್ತೂರಿ ಮಾಸಿಕ ಪತ್ರಿಕೆ, ಪದ್ಮಾ ಶ್ರೀರಾಮ, ನವೆಂಬರ್, ೧೯೯೩

* ಸಂಡೆ ದಿ ಇಂಡಿಯನ್ ಸಂ.೩ ಸಂಚಿಕೆ ೩೦, ಆಗಸ್ಟ್ ೯, ೨೦೧೦ ಸಂ. ಅರಿಂದಮ್ ಚೌಧರಿ ಎ. ಸಂದೀಪ್

**ಅಧ್ಯಯನದ ವಿಧಾನ**

ಪ್ರಸ್ತುತ ಈ ಮಹಾಪ್ರಬಂಧಕ್ಕೆ ಮುಖ್ಯವಾಗಿ ಎರಡು ರೀತಿಯ ಆಕರಗಳನ್ನು ಬಳಸಿ ಕೊಳ್ಳಲಾಗಿದೆ. ಅವುಗಳನ್ನು ಈ ಕೆಳಗಿನಂತೆ ಹೆಸರಿಸಿ ವಿವರಿಸಲಾಗಿದೆ.

೧. ಮೂಲ ಆಕರ ಸಾಮಗ್ರಿ (ಪ್ರೈಮರಿ ಸೋರ್ಸ್‌ಸ್)

೨. ಆನುಷಂಗಿಕ ಆಕರ ಸಾಮಾಗ್ರಿ (ಸೆಂಕಡರಿ ಸೋರ್ಸ್‌ಸ್)

**೧. ಮೂಲ ಆಕರ ಸಾಮಗ್ರಿ**

ಸಂಶೋಧನೆಯ ಮೂಲ ಆಕರ ಸಾಮಗ್ರಿಗಳಲ್ಲಿ ಬಹು ಪ್ರಾಮುಖ್ಯವಾದ ಅಂಶ ಕ್ಷೇತ್ರಕಾರ್ಯ. ಪ್ರಸ್ತುತ ಅಧ್ಯಯನದಲ್ಲಿ ಕ್ಷೇತ್ರಕಾರ್ಯ ಅತ್ಯಂತ ಮಹತ್ವ ಪೂರ್ಣವಾದದ್ದಾಗಿದೆ. ಕ್ಷೇತ್ರಕಾರ್ಯವಿಲ್ಲದ ಚಿತ್ರಕಲೆ ಅಥವಾ ದೃಶ್ಯಕಲೆಯ ಯಾವುದೇ ಒಂದು ಪ್ರಕಾರವನ್ನು ಅಧ್ಯಯನ ಮಾಡುವುದು ಸಾಧ್ಯವಿಲ್ಲ. ಇಡೀ ಜಿಲ್ಲೆಯ ಭೌಗೋಳಿಕ ಅಧ್ಯಯನ ಸಾರವನ್ನೂ, ಇತಿಹಾಸವನ್ನೂ, ಚಿತ್ರಗಳಿರುವ ನೆಲೆಗಳನ್ನು ಗುರುತಿಸುವುದು ಕ್ಷೇತ್ರಕಾರ್ಯದಿಂದಲೇ ಮಾತ್ರ ಸಾಧ್ಯ. ಆದಕಾರಣ ಕ್ಷೇತ್ರಕಾರ್ಯದ ಮೂಲಕ ಸಂದರ್ಶನ, ಚರ್ಚೆ, ಗೊಂಬೆಗಳ ಛಾಯಾಚಿತ್ರಣ ಮಾಡುವುದು ಹಾಗೂ ಕಾರ್ಮಿಕರ ಸ್ಥಿತಿಗತಿ ಹಾಗೂ ಮಾರುಕಟ್ಟೆ ವ್ಯವಸ್ಥೆಯನ್ನು ಜೊತೆಗೆ ಬೊಂಬೆಗಳಿಗೆ ಬಳಸುವಂತಹ ಮರದ ಬಗ್ಗೆ, ಬಣ್ಣಗಾರಿಕೆಯ ಕುರಿತು ಸಂದರ್ಶನಗಳಿಂದ ಮಾಹಿತಿಗಳನ್ನು ಪಡೆದು ಅಧ್ಯಯನಕ್ಕೆ ಪೂರಕವಾಗಿ ಬಳಸಲಾಗಿದೆ.

೧. **ಸಂದರ್ಶನ :** ವಿಶೇಷವಾಗಿ ಇಲ್ಲಿ ಕೆಲವು ಕರಕುಶಲ ಕರ್ಮಿಗಳನ್ನು ಸಂದರ್ಶಿಸಿ ಅವರ ಸಾಂಸ್ಕೃತಿಕ ಪರಿಸರ, ಅವರ ಜೀವನ ಶೈಲಿ, ಅಲ್ಲಿಯ ವಾತಾವರಣ, ಬೊಂಬೆಗಳ ತಯಾರಿಕೆಯ ಕಲೆಯ ಮೇಲೆ ಒಲಿದ ಮನಸ್ಸು, ಕಲಾವಿದರ ಕಲಾ ಸ್ನೇಹಿತರು, ಕಲಾ ಗುರುಗಳು, ಅಲ್ಲಿ ಅವರು ತಯಾರಿಸುವ ಗೊಂಬೆಗಳ ಕಲಾ ಚಟುವಟಿಕೆಗಳು ಅಲ್ಲಿಯ ವಾತಾವರಣದಿಂದ ಪಡೆದ ಅನುಭವಗಳು, ಪ್ರೇರಣೆ ನೀಡಿದ ಗುರುಗಳು, ಕರಕುಶಲ ಕರ್ಮಿಗಳ ವೃತ್ತಿ ಬದುಕು ಈ ಹಂತದಲ್ಲಿ ಅವರು ರಚಿಸಿದ ಹಲವು ರೀತಿಯ ಗೊಂಬೆಗಳು, ಆಟಿಕೆ ಸಾಮಾನುಗಳು, ಶಾಲಾ ಕಲಿಕಾ ಸಾಮಾಗ್ರಿಗಳಲ್ಲದೆ ಇನ್ನೂ ಹಲವು ಬಗೆಯ ಮಾದರಿಯ ಸಾಮಾನುಗಳ ರಚನೆ, ಗೊಂಬೆಗಳ ರಚನಾ ತಂತ್ರ, ವಸ್ತುವಿಷಯ, ವರ್ಣಗಾರಿಕೆ, ಪ್ರಭಾವ ಹೀಗೆ ಹತ್ತು ಹಲವು ವಿಷಯಗಳನ್ನು ಮೌಖಿಕವಾಗಿ ಚರ್ಚಿಸಿ ಸಂದರ್ಶಿಸುವ ಮೂಲಕ ಮಾಹಿತಿಯನ್ನು ಪಡೆಯಲಾಯಿತು.

ಇವುಗಳಲ್ಲದೇ ಕಲಾವಿದರ ಸ್ಥಿತಿಗತಿ, ಮಾರುಕಟ್ಟೆಯ ವ್ಯವಸ್ಥೆಯ ಕುರಿತು ಚರ್ಚಿಸಲು ಪ್ರಶ್ನಾವಳಿಯನ್ನು ತಯಾರಿಸಿಕೊಂಡು ಇವರನ್ನು ಸಂದರ್ಶಿಸಿದೆ. ಇವರ ಹಿರಿಯರಾದ ತಂದೆ ತಾಯಿ ಹಾಗೂ ಅಣ್ಣ ತಮ್ಮಂದಿರೊಂದಿಗೆ ಸಂದರ್ಶನದ ಮೂಲಕ ಚರ್ಚಿಸಿ ಅವರಿಂದಲೂ ಅಧ್ಯಯನಕ್ಕೆ ಪೂರಕವಾದ ಮಾಹಿತಿಗಳನ್ನು ಸಂಗ್ರಹಿಸಿಕೊಂಡು ಬಳಸಿಕೊಳ್ಳಲಾಗಿದೆ. ಸಂದರ್ಶನವು ಕಾಲಘಟ್ಟದಲ್ಲಿ ಬದಲಾವಣೆ ಪಡೆದ ಅಂಶಗಳು ಬಯಲಾಗುವ ಸಾಧ್ಯತೆಗಳಿರುವುದರಿಂದ ಸಂದರ್ಶನ ಅತೀ ಮುಖ್ಯವೆನಿಸುತ್ತದೆ.

೨. **ಛಾಯಾಚಿತ್ರಣ :** ವಿಶಾಲವಾದ ದೃಶ್ಯಕಲಾ ಪ್ರಪಂಚಕ್ಕೆ ಛಾಯಾಗ್ರಹಣವೆಂಬ ಸಾಕ್ಷಿ ಹೇಳುವ ಯಥಾವತ್ತಾದ ಬಣ್ಣದ ಸಮೇತ ಚಿತ್ರದ ಅರಿವು ನೀಡುವ ಅಂಶವಾದ್ದರಿಂದ ದಾಖಲೆ ನಿರ್ಮಿಸುವಾಗ ಹಾಗೂ ಅಧ್ಯಯನದ ನಿಖರತೆ ಹಾಗೂ ಖಚಿತತೆಗಾಗಿ ಛಾಯಾಚಿತ್ರ ಸಂಪೂರ್ಣ ಸಹಕಾರ ನೀಡಬಲ್ಲದಾಗಿದೆ. ಕ್ಯಾಮರಾ ಎಂದರೇನು ಎಂದು ಗೊತ್ತಾಗುವ ಕಾಲಕ್ಕಿಂತ ಮೊದಲಿನ ಚಿತ್ರಗಳು, ಚಿತ್ರಕಾರರು ನಂತರ ಕ್ಯಾಮರಾ ಸೃಷ್ಟಿಯಾದ ದಿನದಿಂದ ಅವೆಲ್ಲ ಛಾಯಾಚಿತ್ರದಲ್ಲಿ ಹಿಡಿದಿಡುವ ಕಾರ್ಯ ಇಂದಿಗೂ ನಿರಂತರವಾಗಿ ನಡೆದೇ ಇದೆ. ಕಾರಣ ಅಧ್ಯಯನಕ್ಕೆ ಬಣ್ಣದ ಅವಶ್ಯಕ ಚಿತ್ರಗಳನ್ನು ಒಂದು ತಂತ್ರಜ್ಞಾನದ ಪೆಟ್ಟಿಗೆಯಿಂದ ಸಾವಿರಾರು ಶಬ್ದಗಳಲ್ಲಿ ಹೇಳಬೇಕಾದುದನ್ನು ಒಂದು ಚಿತ್ರ ಹೇಳುತ್ತದೆ ಎಂಬುದಕ್ಕೆ ಛಾಯಾಚಿತ್ರಣ ಅಧ್ಯಯನಕ್ಕೆ ಅವಶ್ಯವಾಗಿದೆ.

ಕರಕುಶಲ ಕರ್ಮಿಗಳ ಕಾರ್ಖಾನೆಗಳು ಮತ್ತು ಅವರ ಮನೆಗಳಿಗೆ ಹೋಗಿ ಅವರು ತಯಾರಿಸುವ ಹಲವು ಬಗೆಯ ಆಟಿಕೆಗಳು, ಗೊಂಬೆಗಳು, ಶಾಲಾ ಮಕ್ಕಳ ಕಲಿಕೆಯ ಸಾಮಾನು ಹಾಗೂ ಪ್ರಾಣಿ ಪಕ್ಷಿಗಳು ಇನ್ನು ಮುಂತಾದವುಗಳನ್ನು ಮತ್ತು ಅವುಗಳಿಗೆ ನೀಡಿರುವ ಬಣ್ಣಗಳು ಹಾಗೂ ಗೊಂಬೆಗಳ ತಯಾರಿಸುವಂತಹ ಹಳೆಯ ಪಟ್ರಿಯ ಬಳಕೆ, ಆಧುನಿಕ ರೀತಿಯ ವಿದ್ಯುತ್ ಯಂತ್ರದ ಸಹಾಯಗಳಿಂದ ತಯಾರಿಸುವ ಅನೇಕ ವಸ್ತುಗಳ ಬಗೆಗೆ ಮತ್ತು ಮಾರಾಟ ಮಳಿಗೆಗಳಂತೆ ದೊಡ್ಡ ದೊಡ್ಡ ಎಂಪೋರಿಯಂ ಗಳಿಗೂ ಭೇಟಿನೀಡಿ ಜೊತೆಗೆ ಕಲಾವಿದರನ್ನು ಮತ್ತು ಗೊಂಬೆಗಳ ತಯಾರಿಕೆಯಲ್ಲಿ ಬಳಸುವ ಮರವನ್ನು, ಗೊಂಬೆಗಳ ಅಳತೆಗಳಿಗನುಸಾರವಾಗಿ ಕತ್ತರಿಸುವ ಯಂತ್ರಗಳ ಛಾಯಾಚಿತ್ರಗಳನ್ನು ತೆಗೆಯಲಾಯಿತು.

## ಅಧ್ಯಯನದ ಸ್ವರೂಪ

ಅಧ್ಯಾಯ ಒಂದರಲ್ಲಿ ಅಧ್ಯಯನದ ಉದ್ದೇಶ, ಸ್ವರೂಪ, ವಿಧಾನ ಮತ್ತು ವ್ಯಾಪ್ತಿ ಮುಂತಾದ ಅಂಶಗಳ ಕುರಿತಾದ ವಿವರಣೆ ಇದೆ.

**ಎರಡನೆಯ ಅಧ್ಯಾಯದಲ್ಲಿ** ಚನ್ನಪಟ್ಟಣ ಪ್ರದೇಶದಲ್ಲಿನ ಕಲೆಯನ್ನು ಮೈಸೂರಿನ ಒಡೆಯರು, ಹೈದರಾಲಿ ಮತ್ತು ಟಿಪ್ಪುವಿನ ಕಾಲದಲ್ಲಿ ಯಾವ ರೀತಿ ಪ್ರೋತ್ಸಾಹ ನೀಡಿದರು. ಅಲ್ಲದೇ ಇದರ ಮುಂದುವರೆದ ಭಾಗವಾಗಿ ಬ್ರಿಟೀಷರು ಇಲ್ಲಿನ ಕಲೆಯನ್ನು ವಿವಿಧ ಆಯಾಮಗಳ ಮೂಲಕ ಪ್ರೇರಣೆ ನೀಡಿದ ಸನ್ನಿವೇಶವನ್ನು ಕುರಿತು ವಿವರಿಸಲು ಪ್ರಯತ್ನಿಸಲಾಗಿದೆ. ಇದಲ್ಲದೆ ಇಲ್ಲಿನ ಕಲಾಶೈಲಿ ಕಾಲಕ್ಕನುಗುಣವಾಗಿ ಬದಲಾವಣೆ ಹೊಂದಿತ್ತಾ, ವಿವಿಧ ಪರಿಕರಗಳನ್ನು ಬಳಸಿ ಕಲೆಯನ್ನು ಅರಳಿಸಿರುವ ಪರಿ ವಿಭಿನ್ನವಾಗಿರುವುದನ್ನು ಗಮನಿಸುತ್ತಾ ಈ ಪರಿಸರದ ಶಿಲ್ಪಕಲೆ, ಚಿತ್ರಕಲೆ, ವಾಸ್ತುಶಿಲ್ಪ, ಸಂಗೀತ, ಸಾಹಿತ್ಯ ಮತ್ತು ನೃತ್ಯ ಮುಂತಾದವುಗಳ ಪರಂಪರೆಯನ್ನು ಕುರಿತು ವಿಶ್ಲೇಷಿಸಲಾಗಿದ್ದು, ಜೊತೆಗೆ ಕಲಾ ಶೈಲಿಯಲ್ಲಿರುವ ಬಹು ಸತ್ಯಗಳನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ.

**ಮೂರನೆಯ ಅಧ್ಯಾಯದಲ್ಲಿ** ಚನ್ನಪಟ್ಟಣದ ಚಿತ್ತಾರದ ಗೊಂಬೆಗಳ ಹಿನ್ನೆಲೆಯನ್ನು ವಿವರಿಸುತ್ತ ಮತ್ತು ಪ್ರಸಕ್ತ ತಯಾರಿಕೆಗೆ ಹಲವಾರು ರೀತಿಯ ಪರಿಕರಗಳು ಬೇಕಾಗುತ್ತದೆ ಅವುಗಳ ಕುರಿತು, ಹಾಗೆಯೇ ಪ್ರಾಚೀನ ಕಾಲದಲ್ಲಿ ಒಂದು ರೀತಿಯ ಪರಿಕರಗಳು ಬೇಕಾಗುತ್ತಿದ್ದು ಇಂದಿನ ದಿನಗಳಲ್ಲಿ ಮತ್ತೊಂದು ಬಗೆಯ ಯಂತ್ರೋಪಕರಣಗಳು ಮತ್ತು ಪರಿಕರಗಳು ಬೇಕಾಗುತ್ತವೆ. ಇಲ್ಲಿ ಬಳಕೆಗೊಳ್ಳುವ ಪರಿಕರಗಳಲ್ಲಿ ವಿವಿಧ ಮರದ ಕಟ್ಟಿಗೆಗಳು ಹಾಗೂ ಅವುಗಳಿಗೆ ಬೇಕಾದ ಆಕಾರಕ್ಕೆ ಕೆತ್ತಲು ಮತ್ತು ಕೊರೆಯಲು ಕಬ್ಬಿಣದ ಉಪಕರಣಗಳು, ನುಣುಪುಗೊಳಿಸುವ ಸಾಧನಗಳು ಪ್ರಾಕೃತಿಕವಾಗಿ ಸಿದ್ಧಗೊಳಿಸಿಕೊಂಡ ಬಣ್ಣಗಳು ಹೀಗೆ ಅನೇಕ ಪರಿಕರಗಳ ಬಗ್ಗೆ ಆಧುನಿಕ ದಿನಗಳಲ್ಲೂ ಯಾವ ಪರಿಕರಗಳು ಇವುಗಳ ತಯಾರಿಕೆಗೆ ಬೇಕಾಗುತ್ತದೆ ಎಂಬುದನ್ನು ರಚನಾ ವಿಧಾನದ ಹಿನ್ನೆಲೆಯಲ್ಲಿ ತಿಳಿಸಲಾಗಿದೆ. ಹಾಗೂ ರಚನಾ ವಿಧಾನವನ್ನು ಅಲ್ಲಿ ಕೈಗೊಳ್ಳುವ ಕ್ರಮಗಳನ್ನು ಅನುಸರಿಸಿ ವಿಂಗಡಿಸಿಕೊಂಡು ವಿವೇಚಿಸಲಾಗಿದೆ.

**ನಾಲ್ಕನೆಯ ಅಧ್ಯಾಯದಲ್ಲಿ** ಚನ್ನಪಟ್ಟಣದ ಚಿತ್ತಾರದ ಗೊಂಬೆಗಳ ವಸ್ತು ವೈವಿಧ್ಯತೆಯೂ ಅಪಾರವಾಗಿದೆ. ಇಲ್ಲಿ ಮಹಿಳೆ ಮತ್ತು ಪುರುಷರ ಗೊಂಬೆಗಳು, ಪ್ರಾಣಿ ಪಕ್ಷಿಗಳ ಗೊಂಬೆಗಳು, ಅಲಂಕಾರಿಕ ವಸ್ತುಗಳು, ಮಕ್ಕಳ ಆಟಿಕೆಯ ಸಾಮಾನುಗಳು, ಮನೆಯ ಅಲಂಕಾರದ ಪರಿಕರಗಳು ಹೀಗೆ ವಿವಿಧ ರೀತಿಯಲ್ಲಿದ್ದು ಅವುಗಳನ್ನು ವಿಷಯಾನುಸಾರ ವಿಂಗಡಿಸಿಕೊಂಡು ಅಧ್ಯಯನಕ್ಕೆ ಒಳಪಡಿಸುವ ಉದ್ದೇಶವನ್ನು ಹೊಂದಿದೆ.

ಐದನೆಯ ಅಧ್ಯಾಯದಲ್ಲಿ ಚನ್ನಪಟ್ಟಣದ ಚಿತ್ತಾರದ ಗೊಂಬೆಗಳ ತಯಾರಿಕೆಯಲ್ಲಿ ಈ ಪ್ರದೇಶದ ಹಲವಾರು ಕುಟುಂಬಗಳು ತಮ್ಮನ್ನು ತೊಡಗಿಸಿಕೊಂಡಿವೆ. ಗ್ರಾಮೀಣ ಭಾಗದಲ್ಲಿ ಪಾರಂಪರಿಕವಾಗಿ ಇದೆ ವೃತ್ತಿಯನ್ನು ಮಾಡಿಕೊಂಡು ಬಂದ ಕುಟುಂಬಗಳು ಇದರ ತಯಾರಿಕೆಯಲ್ಲಿ ತೊಡಗಿದ್ದಾವೆ. ನಗರ ಪ್ರದೇಶಕ್ಕೆ ಬಂದಂತೆ ಮುಸ್ಲಿಂಮರನ್ನೊಳಗೊಂಡು ವಿವಿಧ ಸಮುದಾಯದ ಜನರು ಈ ಗೊಂಬೆಗಳ ರಚನಾ ಕಾರ್ಯದಲ್ಲಿ

ನಿರತರಾಗಿದ್ದಾರೆ. ಇವರ ಆರ್ಥಿಕ ಹಿನ್ನೆಲೆ, ಕಲಾ ಪರಂಪರೆ ಗೊಂಬೆಗಳ ತಯಾರಿಕೆಯ ವಿಧಿ-ವಿಧಾನಗಳು ಪ್ರತಿಯೊಬ್ಬ ಕಲಾವಿದರು ಇಂತಹ ಗೊಂಬೆಗಳನ್ನು ತಯಾರಿಸುವಲ್ಲಿ ಪ್ರಸಿದ್ಧಿ ಪಡೆದಿದ್ದಾರೆ ಎಂಬುದನ್ನು ಹೇಳಲಾಗಿದೆ. ಅಲ್ಲದೆ ಚನ್ನಪಟ್ಟಣದ ಚಿತ್ತಾರದ ಗೊಂಬೆಗಳ ಮಾರಾಟ ವ್ಯವಸ್ಥೆಯನ್ನು ಪ್ರಾಚೀನ ಕಾಲಕ್ಕೂ ಹಾಗೂ ಇಂದಿನ ಕಾಲಮಾನಕ್ಕೂ ತೌಲನಿಕವಾಗಿ ಬಿಂಬಿಸುವ ಮೂಲಕ ಸದ್ಯದ ಸ್ಥಿತಿಗತಿಗಳನ್ನು ಕಟ್ಟಿಕೊಡಲಾಗಿದೆ. ಹಾಗೆಯೇ ಈ ಗೊಂಬೆಗಳ ತಯಾರಿಕೆಯ ಕಲಾವಿದರ ಆರ್ಥಿಕ ಸ್ಥಿತಿಗತಿ ಸುಧಾರಣೆಗೊಳ್ಳಲು ಕೈಗೊಳ್ಳಬೇಕಾದ ಕ್ರಮಗಳನ್ನು ಕುರಿತು ಚರ್ಚಿಸಲಾಗಿದೆ.

ಕುಶಲ ಕಲೆಗಳಲ್ಲಿ ಪ್ರತಿಭೆಯ ಚಮತ್ಕಾರ, ಶ್ರದ್ಧೆ, ಶ್ರಮಗಳಿಂದ ಜ್ಞಾನವೊಂದರ ಸಂಪರ್ಕದಿಂದ ಮೂರ್ತ ಸ್ವರೂಪ ಪಡೆದು ನಾಡಿನ ತುಂಬಾ ಬಹುಬೇಡಿಕೆಯಿಂದಲೇ ಜೀವಂತ ಕಲೆಗಳಾಗಿ ಆಕರ್ಷಣದ ಮೂಲ ಸ್ವರೂಪದಿಂದ ಅರಳುತ್ತಾ ನಿಂತಿವೆ. ಜ್ಞಾನ, ಬುದ್ಧಿ, ಕರಕುಶಲತೆ ಹೀಗೆ ಅನೇಕ ಪ್ರಾಕೃತಿಕ ಹಾಗೂ ಕೈಗಾರಿಕಾ ಕ್ರಾಂತಿಗಳ ಫಲವಾಗಿ ಎಡರು ತೊಡರುಗಳನ್ನು ಆರ್ಥಿಕ ದಬ್ಬಾಳಿಕೆಯನ್ನು, ಪೈಪೋಟಿಯನ್ನು ಮೆಟ್ಟಿನಿಂತು ಹೆದರದೇ ಕಳೆಗುಂದದೇ ಇರುವ ಚನ್ನಪಟ್ಟಣ ಗೊಂಬೆಗಳ ಕಲೆ ಮತ್ತು ಚನ್ನಪಟ್ಟಣದ ಸಾಂಸ್ಕೃತಿಕ ಪರಿಸರ ಮತ್ತು ಕಲಾ ಹಿನ್ನೆಲೆಗಳನ್ನು ಬಿಂಬಿಸಲಾಗಿದೆ. ಚನ್ನಪಟ್ಟಣದ ಚಿತ್ತಾರದ ಗೊಂಬೆಗಳ ವಸ್ತು ವೈವಿಧ್ಯತೆಗಳನ್ನು ಕುರಿತು ಹೇಳಲಾಗಿದೆ. ಚನ್ನಪಟ್ಟಣದ ಚಿತ್ತಾರದ ಗೊಂಬೆಗಳ ಕಲಾ ಕುಟುಂಬ ಮತ್ತು ಕಲಾವಿದರು ಅವರ ಕಲಾವಂತಿಕೆ ಹಾಗೂ ಈ ಗೊಂಬೆಗಳ ಮಾರಾಟ ವ್ಯವಸ್ಥೆ ಚನ್ನಪಟ್ಟಣದ ಕರಕುಶಲ ಕಲಾವಿದರ ಪ್ರಸ್ತುತ ಸ್ಥಿತಿಗತಿ ಕುರಿತಾಗಿದೆ. ಚನ್ನಪಟ್ಟಣದ ಹಲವು ಕುಟುಂಬಗಳು ಈ ಕಲೆಯನ್ನು ಉಳಿಸಲು ಶ್ರಮಿಸಿದ್ದಾರೆ. ಪ್ರಮುಖ ಆಯ್ದ ಕಲಾವಿದರನ್ನು ಮಾತ್ರ ಕುರಿತು ಅಧ್ಯಯನ ಮಾಡಲಾಗಿದೆ.

**ಆರನೆ ಅಧ್ಯಾಯದಲ್ಲಿ** ಅಧ್ಯಾಯವಾದ ಸಮಾರೋಪದಲ್ಲಿ ಈ ಅಧ್ಯಾಯಗಳ ಸಮೀಕ್ಷಾ ಕಾರ್ಯ ಮತ್ತು ಫಲಿತಗಳನ್ನು ಒಳಗೊಂಡಿದೆ.

ಪರಂಪರೆಯಿಂದ ಪರಂಪರೆಗೆ ಹರಿದು ಬಂದ ಇಂತಹ ಕಲೆಗಳು ನಮ್ಮ ದೇಶದ ಮೂಲ ಸಂಸ್ಕೃತಿಯನ್ನು ತಿಳಿಸುವುದರಿಂದ ಸರಿಯಾದ ರೀತಿಯಲ್ಲಿ ಉಳಿದು, ಬೆಳೆದುಕೊಂಡು ಮುಂದಿನ ತಲೆಮಾರಿಗೂ ರವಾನಿಸುವ ಜವಾಬ್ದಾರಿ ಪ್ರತಿಯೊಬ್ಬ ಪ್ರಜ್ಞಾವಂತನದ್ದಾಗಿರುತ್ತದೆ. ಈ ಕಲೆಗಳನ್ನು ರಚಿಸುವ ಕಲಾಕಾರರ ಆರ್ಥಿಕ ಮಟ್ಟ ಸುಧಾರಿಸಿದರೆ ಜೊತೆಗೆ ಕಲೆಗಳಿಗೆ ಪ್ರೋತ್ಸಾಹವಿದ್ದರೆ ನಿಜಕ್ಕೂ ಕಲೆಗಳು ಉಳಿಯುತ್ತವೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನ ಮಹತ್ವ ಪೂರ್ಣವಾಗಿರುತ್ತದೆ. ಕರಕುಶಲ ಕಲೆಗಳು ಮತ್ತು ಚನ್ನಪಟ್ಟಣದ ಚಿತ್ತಾರದ ಗೊಂಬೆಗಳು ಅವುಗಳನ್ನು ಕುರಿತ ಮಾಹಿತಿಗಳನ್ನು ಒಂದೆಡೆ ಕ್ರೋಢೀಕರಿಸಿ ಒಂದು ಸಂಶೋಧನಾ ಪ್ರಬಂಧ ರೂಪದಲ್ಲಿ ದಾಖಲಿಸುವುದು. ಸಾಧ್ಯವಾದ ಮಟ್ಟಿಗೆ ಅವುಗಳ ವಸ್ತು ಸ್ಥಿತಿಯನ್ನು ಕೇಂದ್ರೀಕರಿಸಿ ರಾಜ್ಯ ವ್ಯಾಪ್ತಿಯಾಗಿ ಅವುಗಳ ಮಹತ್ವವನ್ನು ತಿಳಿಸುವುದರೊಂದಿಗೆ ಜಾಗತಿಕ ಮಟ್ಟದಲ್ಲೂ ಅವುಗಳ ಅಸ್ತಿತ್ವವನ್ನು ದಾಖಲೆಗೊಳಿಸುವ ಪ್ರಯತ್ನ ಇದಾಗಿದೆ. ಒಟ್ಟಾರೆ ಅಧ್ಯಯನದಲ್ಲಿ ಐದು ಅಧ್ಯಾಯಗಳಿಂದ ಕಂಡುಬಂದ ಮುಖ್ಯ ಫಲಿತಗಳನ್ನು ಈ ಅಧ್ಯಾಯ ಹೊಂದಿದೆ.

ಅಧ್ಯಾಯ ೨

# ಚನ್ನಪಟ್ಟಣದ ಸಾಂಸ್ಕೃತಿಕ ಪರಿಸರ ಮತ್ತು ಕಲಾ ಹಿನ್ನೆಲೆ

ಕರ್ನಾಟಕದ ಚಾರಿತ್ರಿಕ ಹಾಗೂ ಸಾಂಸ್ಕೃತಿಕ ಕಾಲಘಟ್ಟದಲ್ಲಿ 'ಚನ್ನಪಟ್ಟಣ' ತಾಲ್ಲೂಕು ತನ್ನ ಹೆಜ್ಜೆ ಗುರುತುಗಳನ್ನು ಮೂಡಿಸಿದೆ. ಕರ್ನಾಟಕದ ವೈವಿಧ್ಯಮಯ ಸಾಂಸ್ಕೃತಿಕ ದಾಖಲೆಗಳಲ್ಲಿ ತನ್ನ ಕಾಣಿಕೆಯ ಇರುವಿಕೆಯನ್ನು ಪಡಿಮೂಡಿಸಿ, "ಬಣ್ಣದ ಬೊಂಬೆಯ ನಗರಿ" ಎಂದೆ ಖ್ಯಾತಿ ಹೊಂದಿರುವ ಇದು ಜಗತ್ತಿಲ್ಲೇ ಆಟದ ಸಾಮಾನುಗಳಲ್ಲಿ ವಿಶಿಷ್ಟತೆ, ಸೊಬಗನ್ನು ಮೆರೆದಿದೆ. ಪೌರಾಣಿಕ ಮಹತ್ವವನ್ನು ಹೊಂದಿರುವುದಲ್ಲದೆ ಐತಿಹಾಸಿಕವಾಗಿ, ವಿಶಿಷ್ಟ ಪಾತ್ರವನ್ನು ನಿರ್ವಹಿಸಿದೆ. ಸಂಗೀತಗಾರರಿಗೆ ವಿದ್ವಾಂಸರುಗಳಿಗೆ, ಕವಿಗಳಿಗೆ, ದಾರ್ಶನಿಕರಿಗೆ ಜನ್ಮ ನೀಡಿತ್ತಲ್ಲದೆ, ಧಾರ್ಮಿಕ, ರಾಜಕೀಯ, ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ರಂಗಗಳಲ್ಲಿ ಭಿನ್ನ ಪರಂಪರೆಯನ್ನೆ ಸೃಷ್ಟಿಸಿದೆ. ಅರೆ ಮಲೆನಾಡಿನಂತಿರುವ ಚನ್ನಪಟ್ಟಣ ತಾಲ್ಲೂಕು ಕೃಷಿ, ಕರಕುಶಲ ಹಾಗೂ ಗೃಹ ಕೈಗಾರಿಕೆಯಲ್ಲೂ ಪ್ರಸಿದ್ಧಿಯನ್ನು ಪಡೆದಿದೆ.

## ತಾಲ್ಲೂಕಿನ ಭೌಗೋಳಿಕ ಪರಿಚಯ

ಈ ಹಿಂದೆ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಚನ್ನಪಟ್ಟಣವು ಒಂದು ತಾಲೂಕು ಕೇಂದ್ರ ಸ್ಥಳವಾಗಿತ್ತು. ಆದರೆ ಈಗ ಅದು ರಾಮನಗರ ಜಿಲ್ಲೆಯ ವ್ಯಾಪ್ತಿಗೆ ಒಳಪಟ್ಟಿದೆ. ಜಿಲ್ಲೆಯ ತಾಲ್ಲೂಕು ಹಾಗೂ ಅದರ

ಮುಖ್ಯಸ್ಥಳ ಚನ್ನಪಟ್ಟಣ. ರಾಮನಗರ ಹಿಂದೆ ಉಪ ತಾಲ್ಲೂಕು ಎನಿಸಿತ್ತು. ತುಮಕೂರು ಜಿಲ್ಲೆಯ ಕುಣಿಗಲ್ಲು, ಬೆಂಗಳೂರಿನ ರಾಮನಗರ ಹಾಗೂ ಕನಕಪುರ, ಮಂಡ್ಯ ಜಿಲ್ಲೆಯ ಮಳವಳ್ಳಿ ಮತ್ತು ಮದ್ದೂರು ತಾಲ್ಲೂಕುಗಳು, ಚನ್ನಪಟ್ಟಣ ತಾಲ್ಲೂಕನ್ನು ಸುತ್ತುವರಿದಿವೆ. "ಒಟ್ಟು ೧೪೬ ಗ್ರಾಮಗಳಿವೆ" ಕಸಬಾ, ವಿರೂಪಾಕ್ಷಿಪುರ ಮತ್ತು ಮಳೂರು ಇವು ತಾಲ್ಲೂಕಿನ ಹೋಬಳಿ ಕೇಂದ್ರಗಳು, ತಾಲ್ಲೂಕಿನ ವಿಸ್ತೀರ್ಣ ೫೪೨.೫ ಚ.ಕಿ.ಮೀ. ಈ ಪ್ರದೇಶದ ಮೇಲ್ಮೈ ಲಕ್ಷಣಗಳನ್ನು ಗಮನದಲ್ಲಿಟ್ಟುಕೊಂಡು ಈ ತಾಲ್ಲೂಕನ್ನು ಎರಡು ಭಾಗವಾಗಿ ವಿಂಗಡಿಸಬಹುದು[೧].

೧. ಉತ್ತರ ಮತ್ತು ವಾಯುವ್ಯ ಭಾಗಗಳಲ್ಲಿ ಹಲವು ಬೆಟ್ಟಗಳ ಸಾಲುಗಳು ಇದ್ದು ಹೆಚ್ಚಾಗಿ ಬೆಂಗಾಡು ಹಾಗೂ ಕುರುಚಲ ಕಾಡುಗಳನ್ನು ಹೊಂದಿರುವ ಪ್ರದೇಶಗಳು ಇಲ್ಲಿ ಕಂಡುಬರುತ್ತವೆ. ಇಲ್ಲಿ ಕೆರೆಗಳು ಮತ್ತು ನೀರಾವರಿ ಸೌಲಭ್ಯಗಳಾವು ಕಂಡುಬರುವುದಿಲ್ಲ.

೨. ದಕ್ಷಿಣ ಮತ್ತು ನೈರುತ್ಯ ಭಾಗಗಳು ಮೈದಾನ ಪ್ರದೇಶವಾಗಿದ್ದು ಜನಭರಿತ ಗ್ರಾಮಗಳು ಹಾಗೂ ಕೆಲವು ಮುಖ್ಯ ಕೆರೆಗಳಿಂದ ಕೂಡಿವೆ.

"ಕಣ್ವ" ಈ ತಾಲ್ಲೂಕಿನ ಮುಖ್ಯ ನದಿಯಾಗಿದ್ದು, ಇದು ಮಾಗಡಿ ತಾಲ್ಲೂಕಿನ ಶ್ರೀಪತಿಹಳ್ಳಿ ಎಂಬ ಗ್ರಾಮದ ಸಮೀಪದಲ್ಲಿ ಹುಟ್ಟಿ, ಉತ್ತರದಿಂದ ದಕ್ಷಿಣಕ್ಕೆ ಹರಿಯುತ್ತದೆ. ಈ ನದಿ ಹರಿಯುವ ಪ್ರದೇಶ ಸಮುದ್ರಮಟ್ಟಕ್ಕಿಂತ ಸುಮಾರು ೬೨೫ ಮೀ ಎತ್ತರದಲ್ಲಿದೆ. ಜಲಾನಯನ ಪ್ರದೇಶ ಸು. ೨೧೫ ಚ.ಕಿ.ಮೀ. ಚನ್ನಪಟ್ಟಣ ತಾಲ್ಲೂಕಿನ ಎಲ್ಲೆಯಿಂದ ಹರಿಯುವ ಈ ನದಿಯ ಭಾಗದ ಉದ್ದ ೩೪ ಕಿ.ಮೀ. ಇದು ತಾಲ್ಲೂಕಿನ ಎಲ್ಲೆಯಿಂದ ಸುಮಾರು ಒಂದು ಕಿ.ಮೀ. ದೂರದಲ್ಲಿ ಸರಗೂರು ಗ್ರಾಮದ ಹತ್ತಿರ ಶಿಂಷಾ ನದಿಯನ್ನು ಸೇರುತ್ತದೆ. ನದಿಯ ಉದ್ದಕ್ಕೂ ಇಕ್ಕಲಗಳಲ್ಲಿ ತೋಟಗಳಿವೆ. ತೆಂಗು, ಕಬ್ಬು, ಭತ್ತ, ಬಾಳೆ, ರೇಷ್ಮೆ, ಮುಂತಾದ ವಾಣಿಜ್ಯ ಬೆಳೆಯನ್ನು ಬೆಳೆಯಲಾಗುತ್ತದೆ. ಸುಮಾರು ೫,೦೦೦ ಎಕರೆ ಭೂಮಿಗೆ ನೀರಾವರಿ ಸೌಕರ್ಯವನ್ನು ಒದಗಿಸಿದೆ. ಈ ತಾಲ್ಲೂಕಿನಲ್ಲಿ ಹಲವಾರು ಕೆರೆಗಳೂ ಇವೆ.

ರಾಮಮ್ಮನ ಕೆರೆ, ಕೂಡ್ಲೂರು, ಕೆರೆ, ಮಳೂರು ಪಟ್ಟಣದ ಕೆರೆ, ಹೊಂಗನೂರು ಕೆರೆ, ಮಳೂರು ಕೆರೆ, ಮೋಗೇನಹಳ್ಳಿ, ಹರೂರು ಕೆರೆ, ಇನ್ನೂ ಮುಂತಾಗಿ ಹಲವಾರು ಸಣ್ಣ-ಪುಟ್ಟ ಕೆರೆಗಳನ್ನು ತಾಲ್ಲೂಕಿನಾದ್ಯಂತ ಗುರ್ತಿಸಬಹುದು. ಚನ್ನಪಟ್ಟಣದಿಂದ ೮ ಕಿ.ಮೀ. ದೂರದಲ್ಲಿರುವ ಅಬ್ಬೂರಿನ ಬಳಿ ನದಿಗೆ ಅಡ್ಡಲಾಗಿ ಅಣೆಕಟ್ಟನ್ನು ಕಟ್ಟಲಾಗಿದೆ. ಇದು ೧೯೪೦-೪೬ ಅವಧಿಯಲ್ಲಿ ನಿರ್ಮಾಣಗೊಂಡಿದೆ. ೩೦ ಗ್ರಾಮಗಳ ವ್ಯಾಪ್ತಿಗೆ ನೀರಾವರಿ ಸೌಕರ್ಯ ಕಲ್ಪಿಸಿ ಇಲ್ಲಿನ ಜನತೆಯ, ಜೀವನಾಡಿ ಎನಿಸಿದೆ.

ಈ ತಾಲ್ಲೂಕಿನ ಪ್ರದೇಶದ ಭೂಮಿಯ ಮಣ್ಣು ಸಾಕಷ್ಟು ವೈವಿಧ್ಯಮಯವಾಗಿದ್ದು, ಭತ್ತ, ಕಬ್ಬು, ರಾಗಿ,

೧. ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ, ಪು.೫೪೪

ಬಾಳೆ, ಮಾವು, ಅಡಕೆ, ವೀಳ್ಯೆದೆಲೆ, ಶುಂಠಿ, ಕಾಫಿ, ಮುಂತಾದ ಬೆಳೆ ಬೆಳೆಯಲು ಸಹಕಾರಿಯಾಗಿದೆ. ಇಲ್ಲಿನ ಅರಣ್ಯ ಪ್ರದೇಶವು ಸುಮಾರು ೯೧೩೧ ಹೆಕ್ಟೇರ್ ವಿಸ್ತೀರ್ಣ ಹೊಂದಿದ್ದು ಬಿದಿರು, ನೀಲಗಿರಿ, ಇತರ ಕುರುಚಲ ಸಸ್ಯವರ್ಗದಿಂದ ಕೂಡಿದೆ. ೧೬ ಕಿ.ಮೀ. ರಾಜ್ಯ ಹೆದ್ದಾರಿ, ೧೧ ಕಿ.ಮೀ. ಮೀಟರ್‌ಗೇಜ್ ರೈಲ್ವೆಮಾರ್ಗವನ್ನು ೬೯ ಕಿ.ಮೀ. ಜಿಲ್ಲಾ ಮುಖ್ಯರಸ್ತೆಯನ್ನು ೩೩೮ ಕಿ.ಮೀ. ಹಳ್ಳಿಗೆ ರಸ್ತೆ ಸಾರಿಗೆಯ ಸೌಲಭ್ಯವನ್ನು ಹೊಂದಿದೆ.

ಗವಿರಂಗಸ್ವಾಮಿ ಬೆಟ್ಟ, ಹಿತ್ತಲಗುಡ್ಡ, ಕರಡಿಕಲ್ಲು, ಚಿಕ್ಕಗುಡ್ಡ, ಬಸವನಕಲ್ಲು ಮಾಕಳಿ, ಕೆಂಗಲ್, ನರಸಿಂಹಸ್ವಾಮಿ ಬೆಟ್ಟಗಳು, ಪ್ರಮುಖ ಬೆಟ್ಟಗಳಾಗಿವೆ. ತಾಲ್ಲೂಕು ರೇಷ್ಮೆ ಬೆಳೆ ಬೆಳೆಯುವುದಕ್ಕೆ ಮತ್ತು ರೇಷ್ಮೆ ಕೈಗಾರಿಕೆಗೂ ಪ್ರಸಿದ್ಧಿ ಹೊಂದಿದೆ. ಮೃದುವಾದ ಆಲೆಮರ ಹೆಚ್ಚಾಗಿ ದೊರಕುವುದರಿಂದ ಬಣ್ಣದ ಸಾಮಾನುಗಳು, ಕೈಗಾರಿಕೆಗಳು, ಅಭಿವೃದ್ಧಿ ಹೊಂದಿವೆಯಲ್ಲದೆ, ಅಮೇರಿಕಾ, ಹಾಲೆಂಡ್, ಡೆನ್ಮಾರ್ಕ್, ಜಪಾನ್, ಚೀನಾ ಹಾಗೂ ಜರ್ಮನ್, ಮುಂತಾದ ರಾಷ್ಟ್ರಗಳಿಗೆ ಬಣ್ಣದ ಸಾಮಾಗ್ರಿಗಳನ್ನು ರಫ್ತು ಮಾಡುತ್ತಿದೆ.

ಚನ್ನಪಟ್ಟಣವೂ ಒಂದು ವ್ಯಾಪಾರ ಕೇಂದ್ರವಾಗಿ ಮನ್ನಣೆ ಪಡೆದಿತ್ತು. ದಟ್ಟವಾದ ಜನವಸತಿ ಇರುವುದು ಮಂಗಳವಾರ ಪೇಟೆಯಲ್ಲಿ, ಮೃದುವಾದ ಆಲೆಮರದ ಬಣ್ಣದ ಸಾಮಾನುಗಳು ತಯಾರಾಗುವುದು ಇಲ್ಲೇ. ಇವು ಇಂದಿಗೂ ವಿಶ್ವವಿಖ್ಯಾತವಾಗಿದ್ದು ಹೊರದೇಶಗಳಿಗೆ ರಫ್ತಾಗುತ್ತಿವೆ. ವೀಣೆಯ ತಂತಿಗಳು, ಬಳೆಗಳು ಹಿಂದೆ ಇಲ್ಲೇ ತಯಾರಾಗುತ್ತಿದ್ದವು. ಈಗ ಈ ಕೈಗಾರಿಕೆಗಳು ನಶಿಸುತ್ತಿವೆ. ಸುಂದರ ತಾಣವಾದ ಈ ಊರು ವ್ಯಾಸತೀರ್ಥರ ಕಾಲದಲ್ಲಿ "ಚಂದ ಪಟ್ಟಣ"ವೆಂದು ಹೆಸರಾಯಿತೆಂದು ಅನಂತರ ಇದು ಚನ್ನಪಟ್ಟಣ ಎಂದಾಯಿತೆಂದೂ ಹೇಳಲಾಗಿದೆ.

"ಕೃತಯುಗದಲ್ಲಿ ವಿಜಯಪಾಲರೂ, ತ್ರೇತಾಯುಗದಲ್ಲಿ ಕಣ್ವಮಹರ್ಷಿಗಳು, ದ್ವಾಪರಯುಗದಲ್ಲಿ ಲಂಬಕರ್ಣರೂ, ಕಲಿಯುಗದಲ್ಲಿ ವಿಜ್ಞಾನೇಶ್ವರನೂ ಇದ್ದರೆಂದು ಇಲ್ಲಿನ ಜನರ ನಂಬಿಕೆ"[೨].

ತಾಲ್ಲೂಕಿನ ಮುಖ್ಯ ಕಸುಬು ವ್ಯವಸಾಯ. ಭತ್ತ, ರಾಗಿ, ತೆಂಗು, ಹಿಪ್ಪನೇರಳೆ, ವೀಳ್ಯೆದೆಲೆ, ವಿಶೇಷವಾದ ಬೆಳೆಗಳು. ತೆಂಗು, ರೇಷ್ಮೆ ಹಾಗೂ ವೀಳ್ಯೆದೆಲೆ ವಾಣಿಜ್ಯ ಬೆಳೆಗಳು. ಇತ್ತೀಚೆಗೆ ಬೆಳೆಯುತ್ತಿರುವ ಯಾಲಕ್ಕಿಬಾಳೆ ಕೂಡ ವಾಣಿಜ್ಯ ಬೆಳೆಯಾಗಿದೆ. ಕಬ್ಬು ಪ್ರಮುಖ ಬೆಳೆಯಲ್ಲದಿದ್ದರೂ ಪಟ್ಟಣದ ಸುತ್ತಮುತ್ತ ಬೆಳೆಯುವ 'ಪಟಾವಳಿ' ಕಬ್ಬು ಸಂಕ್ರಾಂತಿ ಹಬ್ಬದಲ್ಲಿ ಎಲ್ಲರ ಮನಸೆಳೆಯುತ್ತದೆ. ಅಂಬಾಡಹಳ್ಳಿಯ ಸುತ್ತಮುತ್ತ ಬೆಳೆಯುವ 'ದೇವರ ತುಳಸಿ' ಬೆಂಗಳೂರು ನಗರದಲ್ಲಿ ಪ್ರಸಿದ್ಧಿ ಪಡೆದಿದೆ. ಇತ್ತೀಚೆಗೆ ತರಕಾರಿಯನ್ನು ಸೊಪ್ಪುಗಳನ್ನು ಸಾಕಷ್ಟು ಬೆಳೆಯತೊಡಗಿದ್ದಾರೆ. ಡಾ. ಮರೀಗೌಡರ ವಿಶೇಷ ಕಳಕಳಿಯಿಂದ ಭೈರಾಪಟ್ಟಣದ ದೊಂಬರ ಕೊಡುಗೆ ಜಮೀನು ತೋಟಗಾರಿಕೆ ಇಲಾಖೆಗೆ ಸೇರಿ ಸೀಬೆ-ಸಪ್ಪೋಟ ಹಣ್ಣುಗಳನ್ನು ಸಮೃದ್ಧವಾಗಿ ಬೆಳೆಯಲಾಗುತ್ತಿದೆ.

ಚನ್ನಪಟ್ಟಣ ತಾಲ್ಲೂಕಿನಲ್ಲಿ ಒಕ್ಕಲಿಗರೇ ಪ್ರಧಾನವಾಗಿದ್ದರೂ, ಎರಡನೆಯ ಸ್ಥಾನಮಾನವನ್ನು ಮುಸ್ಲಿಂರು ಪಡೆದಿದ್ದಾರೆ. ತಾಲ್ಲೂಕಿನ ಎಂ.ಕೆ. ದೊಡ್ಡಿ, ಹೊಂಗನೂರು, ಕೋಡಂಬಳ್ಳಿ, ಬಿಟ್ಟರೆ ಅತೀ ಹೆಚ್ಚು ಮುಸ್ಲಿಂರು

೨. ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ, ಪು.೫೪೪

ವಾಸಿಸುವ ಸ್ಥಳ ಚನ್ನಪಟ್ಟಣ ನಗರದಲ್ಲಿ ಬ್ರಾಹ್ಮಣ, ವೀರಶೈವ, ಬೆಸ್ತ, ದಾಸ, ಬಣಜಿಗ, ಕುರುಬ, ಕುಂಬಾರ, ಉಪ್ಪಾರ, ತಿಗಳ, ಲಂಬಾಣಿ, ಕ್ರೈಸ್ತರು, ಅರಸುಗಳು ಮುಂತಾದ ಜಾತಿಗಳೇ ಅಲ್ಲದೆ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದ ಜನರು ಹಾಗೂ ಇರುಳಿಗರು ಈ ತಾಲ್ಲೂಕಿನಲ್ಲಿ ಇದ್ದಾರೆ.

ತಾಲ್ಲೂಕಿನಲ್ಲಿ ಮಳೆ ಆಶ್ರಯದಲ್ಲಿ ಬೆಳೆಯುವ ಬೆಳೆಗಳೇ ಅಧಿಕ. ಒಟ್ಟು ಹಿಡುವಳಿ ಭೂಮಿಯಲಿ ಕಾಲುಭಾಗದಷ್ಟು ಮಾತ್ರ ನೀರಾವರಿ ಆಗಿದೆ. ತಾಲ್ಲೂಕಿನಲ್ಲೇ ದೊಡ್ಡ ಕೆರೆ ಎಂದರೆ ಕಣ್ವ ಕೆರೆ ಇಷ್ಟೇ ಅಲ್ಲದೆ ೨೭ ದೊಡ್ಡ ಕೆರೆಗಳು, ೧೫ ಸಣ್ಣ ಕೆರೆಗಳು ನೂರಾರು ನೀರಾವರಿ ಮೂಲಗಳು ಈ ತಾಲ್ಲೂಕಿನಲ್ಲಿ ಇವೆ.

ಈ ತಾಲ್ಲೂಕು ೫೩೫ ಚದರ ಕಿ.ಮೀ. ವಿಸ್ತಾರ ಹೊಂದಿದ್ದು ೧೪೬ ಗ್ರಾಮಗಳನ್ನು ಒಳಗೊಂಡಿದೆ. ಪ್ರಸ್ತುತ ಕಸಬಾ, ಮಳೂರು ಮತ್ತು ವಿರೂಪಾಕ್ಷಿಪುರವೆಂಬ ೩ ಹೋಬಳಿಗಳನ್ನು ಹೊಂದಿದ್ದು, ವಿರೂಪಾಕ್ಷಿಪುರ ಹೋಬಳಿಯ ಕೆಲವು ಹಳ್ಳಿಗಳು ಚನ್ನಪಟ್ಟಣ ವಿಧಾನಸಭಾ ಕ್ಷೇತ್ರಕ್ಕೂ ಮತ್ತೆ ಕೆಲವು ಹಳ್ಳಿಗಳು ಸಾತನೂರು ವಿಧಾನಸಭಾ ಕ್ಷೇತ್ರಕ್ಕೂ ಸೇರುತ್ತವೆ.

೧೯೯೧ರ ಜನಗಣತಿಯ ಪ್ರಕಾರ ಈ ತಾಲ್ಲೂಕಿನ ಜನಸಂಖ್ಯೆ ೧,೭೨,೯೯೦ ಇದರಲ್ಲಿ ಚನ್ನಪಟ್ಟಣ ನಗರದಲ್ಲಿಯೇ ೫೫,೨೮೯ ಜನಸಂಖ್ಯೆಯಿದೆ. ೨೦೧೧ರ ಜನಗಣತಿಯ ಈಗಿನ ಅಂದಾಜಿನ ಪ್ರಕಾರ ತಾಲ್ಲೂಕಿನ ಒಟ್ಟು ಜನಸಂಖ್ಯೆ ೨,೫೨,೬೫೩ ದಾಟಿದೆ.

ಮೇಲುಕೋಟೆಯನ್ನು ಕೇಂದ್ರವನ್ನಾಗಿ ಮಾಡಿಕೊಂಡು, ರಾಮಾನುಜಾಚಾರ್ಯರು ಈ ತಾಲ್ಲೂಕಿನ ಹಲವಾರು ಹಳ್ಳಿಗಳಲ್ಲಿ ವೈಷ್ಣವ ಪಂಥದ ದೇವರುಗಳನ್ನು ಪ್ರತಿಷ್ಠಾಪಿಸಿದ್ದಾರೆ. ಮಾಧ್ವಕೇಂದ್ರಗಳಾಗಿ ಮಳೂರು, ಅಬ್ಬೂರು, ಬ್ರಹ್ಮಣಿಪುರಗಳಿವೆ. ಮಳೂರಿನಲ್ಲಿ ಶ್ರೀ ರಾಮ ಪ್ರಮೇಯ ದೇವಸ್ಥಾನ, ಹೊಯ್ಸಳ ಶೈಲಿಯಲ್ಲಿ ಕಟ್ಟಿದ ಬೃಹತ್ ದೇವಾಲಯ, ಇಲ್ಲಿ ವ್ಯಾಸರಾಯರಿಂದ ಸುಂದರವಾದ ನವನೀತ ಚೋರನಾದ (ಕೃಷ್ಣನ ಅಂಬೆಗಾಲು ಇಡುತ್ತಿರುವ ಕೃಷ್ಣ) ಮುದ್ದಾದ ವಿಗ್ರಹ ಪ್ರತಿಷ್ಠಾಪನೆ ಆಗಿದೆ. ಈ ವಿಗ್ರಹವನ್ನು ನೋಡಿಯೇ ಶ್ರೀ ಪುರಂದರ ದಾಸರು ತಮ್ಮ ಸುಪ್ರಸಿದ್ಧ ಕೀರ್ತನೆಯಲ್ಲಿ 'ಆಡಿಸಿದಳಾ ಯಶೋಧೆ'ಯನ್ನು ರಚಿಸಿದ್ದಾರೆ ಎಂಬುದು ಅದರ ಶ್ರೇಷ್ಠತೆಯನ್ನು ತಿಳಿಸುತ್ತದೆ.

'ಅಬ್ಬೂರು' ಕಣ್ವನದಿಯ ದಂಡೆಯಲ್ಲಿದ್ದು ಇಲ್ಲಿ ಶ್ರೀ ಬ್ರಹ್ಮಣ್ಯತೀರ್ಥರ ವೃಂದಾವನವಿದೆ. ಮಾಧ್ವರ ಪವಿತ್ರ ಸ್ಥಳಗಳಲ್ಲಿ ಇದೂ ಒಂದಾಗಿದೆ. ಕೂಡ್ಲೂರು, ಗಂಗರ ಮತ್ತು ಚೋಳರ ಆಳ್ವಿಕೆಗೆ ಒಳಪಟ್ಟಿತ್ತು. ಚನ್ನಪಟ್ಟಣ ಟೌನ್‌ನಲ್ಲಿರುವ ವ್ಯಾಸಮಠ, ಶ್ರೀವರದಾರಾಜಸ್ವಾಮಿ ದೇವಸ್ಥಾನ, ಕೋಟೆ ಆಂಜನೇಯ, ಈಶ್ವರ ದೇವಸ್ಥಾನ, ಕಾಳಮ್ಮ, ಕೋಟೆ ಮಾರಮ್ಮ, ಕೊಲ್ಲಾಪುರದಮ್ಮ ದೇವಾಲಯಗಳು, ಅತಿ ವಿಶಿಷ್ಟವಾದ ಸುಗ್ರೀವನ ದೇವಸ್ಥಾನಗಳು ಸಾಕಷ್ಟು ಭಕ್ತರನ್ನು ಒಳಗೊಂಡಿವೆ. ಇಷ್ಟೇ ಅಲ್ಲದೆ ತಾಲ್ಲೂಕಿನ ಕೂರಣಗೆರೆಯ ನರಸಿಂಹಸ್ವಾಮಿ, ಬೇವೂರಿನ ಬೆಟ್ಟದ ತಿಮ್ಮಪ್ಪ, ದೇವರಹೊಸಹಳ್ಳಿಯ ಸಂಜೀವರಾಯಸ್ವಾಮಿ, ಕೆಂಗಲ್ ಆಂಜನೇಯ, ಅಬ್ಬೂರು ದೊಡ್ಡಿಯ

ಬೀರೇಶ್ವರ. ದೇವರಹಳ್ಳಿಯ ದೊಡ್ಡಯ್ಯ ದೇವಸ್ಥಾನಗಳು ತಾಲ್ಲೂಕಿನ ಭಕ್ತಾದಿಗಳ ಮನಸ್ಸಿನಲ್ಲಿ ಮೂಡಿವೆ. ತಾಲ್ಲೂಕಿನಲ್ಲೇ ಏಕೈಕ ಜೈನ ಸಂಪ್ರದಾಯದ ಸವಣಪ್ಪ, ಅರೆ ತಿಪ್ಪೂರಿನ ಹತ್ತಿರದ ಬೆಟ್ಟದ ಮೇಲಿದ್ದಾನೆ.

**ಚನ್ನಪಟ್ಟಣ ತಾಲ್ಲೂಕಿನ ಚಾರಿತ್ರಿಕ ಹಿನ್ನೆಲೆ**

ಚನ್ನಪಟ್ಟಣ ತಾಲ್ಲೂಕು ಚಾರಿತ್ರಿಕ ದೃಷ್ಟಿಯಿಂದ ವಿಶಿಷ್ಟತೆಯನ್ನು ಮೆರೆದಿದೆ. ಕವಿಯೊಬ್ಬರು ವರ್ಣಿಸಿರುವಂತೆ

ಭುವನ ಜನಮೋಹಿತಮಾದಿ ಪುರಿಯು ಕೃತಯುಗದ

ವಿಜಯಪಾಲ ತ್ರೇತೆಯ ಕಣ್ವಮೇಣ್

ದ್ವಾಪರದ ಲಂಬಕರ್ಣ ಕಲಿಯ ಯಾಜ್ಞವಲ್ಕ್ಯತ ಸ್ಮೃತಿಯ ಭಾಷ್ಯ

ಕುರ, ಶ್ರೀ ವಿಜ್ಞಾನೇಶ್ವರ ಮಹಾರಾಜರ ನಿವಾಸಸ್ಥಾನ

ಮೆನಿಸಿ ಪಂಚಕ್ರೋಶ, ಚತುರ್ವೇದಪುರ ಜ್ಞಾನಮಂಟಪ ತೆಂಕಣ

ದಯೋಧ್ಯೇತ್ಯಾದಿ ನಾಮಗಳಿಂ ರಂಜಿಸಿ ವ್ಯಾಸತೀರ್ಥರ

ಕಾಲದ ಚಂದಪಟ್ಟಣ ಪೆಸರ್ವೆರೆದು ಅತಿ ಪ್ರಾಚೀನವತಿ ಅಂದ

ಮಾಗಿರ್ದು ಕಂಗೊಳಿಸುತಿಹುದು[೩]

ಇದು ಪೌರಾಣಿಕ ಪ್ರಸಿದ್ಧಿಯನ್ನು ಪಡೆದಿತ್ತು. ತಾಲ್ಲೂಕಿನ ಚಾರಿತ್ರಿಕ ಹಿನ್ನೆಲೆಯನ್ನು ತಿಳಿದುಕೊಳ್ಳಲು ನಮಗಿರುವ ಮುಖ್ಯ ಆಕರಗಳೆಂದರೆ ಶಾಸನಗಳು, ಇಂಗ್ಲಿಷ್ ಮತ್ತು ಮರಾಠರ ದಾಖಲೆಗಳು, ಅಲ್ಪಸ್ವಲ್ಪ ಸಿಗುವ ಸಾಹಿತ್ಯಿಕ ದಾಖಲೆಗಳು ಹಾಗೂ ಇಲ್ಲಿನ ಪ್ರಾಚೀನ ಸ್ಮಾರಕ ಮತ್ತು ಜಾನಪದ ಕಥಾನಕಗಳು.

ಚನ್ನಪಟ್ಟಣ ಹಲವಾರು ಹೆಸರುಗಳಿಂದ ವರ್ಣಿಸಲ್ಪಟ್ಟಿದೆ. ಚಂದಾಪಟ್ಟಣವೆಂದು, ವ್ಯಾಸತೀರ್ಥರ ಕಾಲದಲ್ಲಿ ತನ್ನ ಆವರಣ ಸೌಂದರ್ಯದಿಂದ ಪ್ರಖ್ಯಾತವಾಗಿದ್ದು,ಚಂದಾಪುರ, ಪಂಚಕೋಶ, ಚತುರ್ವೇದಪುರ, ಜ್ಞಾನಮಂಟಪ ಕ್ಷೇತ್ರ, ತೆಂಕಣ ಅಯೋಧ್ಯಾ ಎಂದು ವಿವಿಧ ಹೆಸರುಗಳಿಂದ ವರ್ಣಿಸಲ್ಪಟ್ಟಿದೆ.

೧೮೦೦ರ ಜುಲೈ ತಿಂಗಳಲ್ಲಿ ಬೆಂಗಳೂರು ಜಿಲ್ಲೆಯನ್ನು ಸಂದರ್ಶಿಸಿದ ಬ್ರಿಟಿಷ್ ಅಧಿಕಾರಿ ಡಾ. ಫ್ರಾನ್ಸಿಸ್ ಬುಕೆನಾನ್ ಇದನ್ನು 'A very Beautiful country' ಎಂದು ವರ್ಣಿಸಿ "ಚಿನಪಟಂ ತೆಂಗು, ಅಡಿಕೆ, ಕಬ್ಬು, ಬಾಳೆತೋಟಗಳಿಂದ, ಇಲ್ಲಿನ ಹಸಿರು ಗದ್ದೆಗಳಿಂದ ಕಂಗೊಳಿಸುತ್ತದೆ. ಇಲ್ಲಿ ಬಿದಿರು ಸಾಮಾನ್ಯ, ಸಾವಿರಾರು ಮನೆಗಳಿದ್ದು ಗ್ಲಾಸು, ಬಳೆ, ಸ್ಟೀಲ್, ವೈರ್, ಬಿಳಿಸಕ್ಕರೆ ಕಾರ್ಖಾನೆಗಳಿವೆ"[೪] ಎಂದಿದ್ದಾನೆ.

---

೩. ಅರ್ಕಾವತಿ ಸ್ಮರಣ ಸಂಚಿಕೆ ಅಖಿಲ ಭಾರತ ೬೭ನೇ ಕನ್ನಡ ಸಾಹಿತ್ಯ ಸಮ್ಮೇಳನ, ಕನಕಪುರ (ಸಂ) ಎಂ. ಭೈರೆಗೌಡ, ತಾ.ಸಿ. ತಿಮ್ಮಯ್ಯ, ಪು. ೨೩೭

೪. ಅದೇ. ಪು. ೨೩೭

ಗಂಗರ ಕಾಲದಲ್ಲಿ ಚನ್ನಪಟ್ಟಣ ಪ್ರಸಿದ್ಧಿಗೆ ಬಂದಿತು. ಗಂಗರ ಕಾಲದಲ್ಲಿ ಗಂಗವಾಡಿ ೯೬೦೦೦ ಪ್ರದೇಶದಲ್ಲಿ ಶಿಂಷಾ ಕಣಿವೆಯನ್ನು ಚಿಕ್ಕಗಂಗವಾಡಿ ಎಂದು ಕರೆಯುತ್ತಿದ್ದರು. ಹೊಂಗನೂರು, ಅದರ ಉಪರಾಜಧಾನಿಯಾಗಿಯೂ, ಮಾಕುಂದ ರಾಜಧಾನಿಯಾಗಿಯೂ ಪ್ರಸಿದ್ಧಿ ಬಂತು. ಗಂಗರ ದೊರೆ ಭೂವಿಕ್ರಮ ಮತ್ತು ಶ್ರೀಪುರುಷರ ಕಾಲದಲ್ಲಿ ಚನ್ನಪಟ್ಟಣ ಆರ್ಥಿಕ ಮತ್ತು ಸೈನಿಕ ದೃಷ್ಟಿಯಿಂದಲೂ ಆಯಾಕಟ್ಟಿನ ಸ್ಥಳವಾಗಿತ್ತು. ಆ ಕಾರಣದಿಂದಲೇ ಮಾಕುಂದ ರಾಜಧಾನಿಯಾಗಿರಬೇಕು. ಚೋಳ ಮತ್ತು ಚಾಳುಕ್ಯರ ಆಕ್ರಮಣಗಳಿಂದ ರಕ್ಷಿಸಿಕೊಳ್ಳುವ ಉದ್ದೇಶವಿದ್ದಿರಬೇಕು. ಮುಂದೆ ಈ ಸ್ಥಳ ಚೋಳರ ಆಕ್ರಮಣಗಳಿಗೆ ತುತ್ತಾಗಿ ಕೆಲವಾರು ವರ್ಷ ಅವರ ಆಳ್ವಿಕೆಗೆ ಒಳಪಟ್ಟಿತು. ಇದೇ ಅವಧಿಯಲ್ಲಿ ಮಳೂರು, ಮಳೂರುಪಟ್ಟಣ, ಅಬ್ಬೂರು, ಕೂಡ್ಲೂರು, ಬ್ರಹ್ಮಣಿಪುರ ಇತರ ಸ್ಥಳಗಳು ವ್ಯಾಪಾರ ಮತ್ತು ಧಾರ್ಮಿಕ ಕೇಂದ್ರಗಳಾಗಿ ಪ್ರಸಿದ್ಧಿಗೆ ಬಂದವು. ಚನ್ನಪಟ್ಟಣ ತಾಲ್ಲೂಕಿನ ಸಿದ್ಧಾಪುರದಲ್ಲಿ ಮಧ್ಯಶಿಲಾಯುಗದ ಅವಶೇಷಗಳು ಕಂಡುಬಂದಿವೆ. ವಿಠೇಲನಹಳ್ಳಿಯಲ್ಲಿಯೂ ಶಿಲಾಯುಗದ ಅವಶೇಷಗಳು ಇವೆ. ಇವು ಕ್ರಿ.ಪೂ. ೧೦,೦೦೦ದಿಂದ ೮೦೦೦ ಕಾಲಕ್ಕೆ ಸೇರಿದಂಥವು. ಇಲ್ಲಿ ಕೈಗೊಡಲಿಗಳು ಇತರ ಪುರಾತನ ಅವಶೇಷಗಳು ಲಭ್ಯವಾಗಿವೆ.

ಗಂಗರ ಕಾಲದ ಮಾಕುಂದ ರಾಜಧಾನಿಯಾಗಿತ್ತಲ್ಲದೆ 'ಕಿಲಾಲೈನಾಡು'ವಿನ ಮುಖ್ಯ ಕೇಂದ್ರಸ್ಥಳವಾಗಿತ್ತು. ಅಂದರೆ ಚೋಳರ ಕಾಲದಲ್ಲಿ ಇದನ್ನು ಜಯಗೊಂಡ 'ಚೋಳಪುರಂ' ಎಂದು ಹೆಸರಿಸಲಾಯಿತು.

"ಮೊಗೇನಹಳ್ಳಿಯ ಕ್ರಿ.ಶ. ೧೦೦೦ದ ಶಾಸನದಲ್ಲಿ ಉಲ್ಲೇಖಿತವಾಗಿರುವಂತೆ 'ಪುಂಗನೂರು ಅಗ್ರಹಾರ' ಅಸ್ತಿತ್ವಕ್ಕೆ ಬಂದಿತು. ಇದನ್ನು ರಾಜಗಾಜನ ಹೆಂಡತಿಯ ಹೆಸರಿನಲ್ಲಿ ತ್ರೈಲೋಕ್ಯಮಹಾದೇವಿ, ಚತುರ್ವೇದಿ ಮಂಗಳಂ' ಎಂದು ಕರೆಯಲಾಯಿತು. ಕ್ರಿ.ಶ. ೧೦೦೬ರಲ್ಲಿ ಸ್ಥಾಪಿಸಿ 'ಜಯದೊಂಡಚೋಳ ವಿನ್ನಾಗರ್' ಎಂದು ಇದೇ ಅವಧಿಯಲ್ಲಿ ಮಳೂರಿನ ಅಗ್ರಹಾರ 'ರಾಜರಾಜ ಚತುರ್ವೇದಿ ಮಂಗಲಂ' ಎಂಬ ಹೆಸರಿನಿಂದ ಪ್ರಸಿದ್ಧಿಗೆ ಬಂದಿತು"[೫]. "ಕ್ರಿ.ಶ. ೧೦೨೦ರ ತಾಮ್ರ ಶಾಸನದಲ್ಲಿ ಕೂಡ್ಲೂರು ಅಗ್ರಹಾರ ರಾಜರಾಜ ಚೋಳನ ಹೆಸರಿನಲ್ಲಿ ಸ್ಥಾಪಿಸಲಾಯಿತು"[೬].

ಚನ್ನಪಟ್ಟಣ ತಾಲ್ಲೂಕಿನಲ್ಲಿ ಚೋಳ ದೊರೆಗಳು ಪ್ರಾಬಲ್ಯಗೊಂಡಂತೆ ಅಗ್ರಹಾರಗಳನ್ನು ಸ್ಥಾಪಿಸುವ ಮೂಲಕ ವೈಷ್ಣವ ಮತವನ್ನು ಮತ್ತಷ್ಟು ಬಲಿಷ್ಠಗೊಳಿಸಿದರು. ಆಳ್ವಾರರು ತಮಿಳುನಾಡಿನಿಂದ ಬಂದು ಇಲ್ಲಿ ನೆಲೆಸಿದ ವಿಚಾರ ಇದರಿಂದ ವೇದವಾಗುತ್ತದೆ. ಮಳೂರು ಪಟ್ಟಣದ ನಾರಾಯಣಸ್ವಾಮಿ ದೇವಸ್ಥಾನ 'ಮನ ಊರು ಅಥವಾ ಮಳೂರಿನ ಅಪ್ರಮೇಯಸ್ವಾಮಿ ದೇವಸ್ಥಾನ ಇದೇ ಅವಧಿಯಲ್ಲಿ ನಿರ್ಮಾಣಗೊಂಡವು.

"ಕ್ರಿ.ಶ. ೧೧೧೮ರಲ್ಲಿ ರಾಜೇಂದ್ರ ಚೋಳನು ಹೊಂಗನೂರಿಗೆ ಭೇಟಿಕೊಟ್ಟು ಸ್ವಲ್ಪ ಕಾಲ ತಂಗಿದ್ದ ವಿಚಾರವನ್ನು ಹೊಂಗನೂರಿನ ಶಾಸನವೊಂದು ಉಲ್ಲೇಖಿಸುತ್ತದೆ. ಪುಂಗನೂರಿನ ಕುಂದೈವನ್ನಾಗರ್ ಆಳ್ವಾರ್ ದೇವರಿಗೆ ದಾನಬಿಟ್ಟ

---

೫. ಉತ್ತರ ಕರ್ನಾಟಕ ವಿಕಿಕರಣ, ಚನ್ನಪಟ್ಟಣ, ಪು. ೩೨೪೭೩

೬. ಎಪಿಗ್ರಾಫಿಯ ಕರ್ನಾಟಕ ಸಂ. ೬, ಪು. ೩೧೨

ಸಂಗತಿಯನ್ನು ಇದೇ ಶಾಸನ ತಿಳಿಸುತ್ತದೆ. ಹೊಂಗನೂರಿನ ವೀರಗಲ್ಲು ಶಾಸನವು ಹೊಯ್ಸಳ ನರಸಿಂಹನ ಮಂತ್ರಿ ಮಲ್ಲಿದೇವ ದಣ್ಣಾಯಕ ಸಾಗುಂದ ಕೋಟೆಯನ್ನು ವಶಪಡಿಸಿಕೊಳ್ಳುವಾಗ ಮಡಿದ ವಿಚಾರವನ್ನು ತಿಳಿಸುತ್ತದೆ. ಈತನ ಹೆಂಡತಿ ನಾಗವ್ವ ಇಲ್ಲಿ ವೀರಗಲ್ಲೊಂದನ್ನು ಪ್ರತಿಷ್ಠಾಪಿಸಿದಳು. ಚೋಳರು ಇಲ್ಲಿನ ದೇವಾಲಯಗಳನ್ನು ನಿರ್ಮಿಸಿದರಲ್ಲದೆ ಅವುಗಳಿಗೆ ದತ್ತಿಕೊಟ್ಟ ವಿಚಾರವು ಶಾಸನದಲ್ಲಿ ಪ್ರಸ್ತಾಪಿಸಲ್ಪಟ್ಟಿದೆ[೭].

ಪುಂಗನೂರಿನ ಸೋಮಶೇಖರನ ಮಗ ಪೊಳೈಯನ್ ಎಂಬಾತನು ಇದೇ ಗ್ರಾಮದ ಕಂದೈವನ್ನಾಗರ್ ಆಳ್ವರ್ ದೇವರಿಗೆ ದತ್ತಿ ಬಿಟ್ಟ ಸಂಗತಿ ಇದೆ. ರಾಜರಾಜ ಚೋಳನು ಮಳೂರುಪಟ್ಟಣದ ನಾರಾಯಣಸ್ವಾಮಿ ದೇವಸ್ಥಾನಕ್ಕೆ ದತ್ತಿ ದಾನ ಮಾಡಿದ ವಿಚಾರವನ್ನು "ಮಾಗೇನಹಳ್ಳಿಯ ಶಾಸನ"[೮] ಉಲ್ಲೇಖಿಸುತ್ತದೆ. ಮುಡಿಗೊಂಡ ಚೋಳ ಮಂಡಲದ ಅಧಿಕಾರಿಯೊಬ್ಬನು ಕೆರೆಯನ್ನು ಕಟ್ಟಿಸಿ ದುರ್ಗೈಯಾರ್ ದೇವರಿಗೆ ನೈವೇದ್ಯಕ್ಕಾಗಿ ದಾನ ನೀಡಿದ ವಿಚಾರವನ್ನು ಕ್ರಿ.ಶ. ೧೦೧೪ರ ಶಾಸನವೊಂದು ತಿಳಿಸುತ್ತದೆ. ಕ್ರಿ.ಶ. ೧೦೪೪-೪೫ರ ವರೆಗೆ ಆಳ್ವಿಕೆ ನಡೆಸಿದ ರಾಜಾಧಿರಾಜ ಮತ್ತು ಅನಂತರ ಅಧಿಕಾರಕ್ಕೆ ಬಂದ ಚೋಳರಾಜ, ವೀರರಾಜೇಂದ್ರರು, ಸಿದ್ಧೇಶ್ವರ ಮತ್ತು ಕೈಲಾಸೇಶ್ವರ ದೇವಸ್ಥಾನಕ್ಕೆ ದತ್ತಿಬಿಟ್ಟ ವಿಚಾರವನ್ನು "ಬ್ಯಾಡರಹಳ್ಳಿಯ ಶಾಸನ"[೯] ಉಲ್ಲೇಖಿಸುತ್ತದೆ. "೧೦೮೬ರಲ್ಲಿ ೬ನೇ ವಿಕ್ರಮಾದಿತ್ಯ ಕೈಲಾಸನಾಥೇಶ್ವರ ದೇವಸ್ಥಾನಕ್ಕೆ ನಂಗಲಿಯಿಂದ ಆನೆಗಳನ್ನು ಕಳುಹಿಸಿದ ವಿಚಾರವನ್ನು "ಹೊನ್ನಾಯಕನಹಳ್ಳಿಯ ಶಾಸನ"[೧೦] ಪ್ರಸ್ತಾಪಿಸುತ್ತದೆ.

ಚೋಳರ ಕಾಲದಲ್ಲಿ ಚನ್ನಪಟ್ಟಣದ ಸುತ್ತಮುತ್ತಲ ಹಳ್ಳಿಗಳು ಅದರಲ್ಲೂ ಹೊಂಗನೂರು, ಮಳೂರು. ಕೂಡ್ಲೂರು, ಮಳೂರು ಪಟ್ಟಣಗಳು, ಕೃಷಿ, ವ್ಯಾಪಾರ ಹಾಗೂ ಧಾರ್ಮಿಕ ಕ್ಷೇತ್ರಗಳಲ್ಲಿ ಪ್ರಸಿದ್ಧಿಗೆ ಬಂದ ವಿಚಾರಗಳನ್ನು ಶಾಸನಗಳು ಉಲ್ಲೇಖಿಸುತ್ತವೆ. ಇವು ಆ ಕಾಲದ ಅತ್ಯಂತ ಚಟುವಟಿಕೆಯ ಕೇಂದ್ರಗಳಾಗಿದ್ದವು.

ಚೋಳರ ನಂತರ ಚನ್ನಪಟ್ಟಣ ಹೊಯ್ಸಳ ಮತ್ತು ವಿಜಯನಗರದ ಅರಸರ ಆಳ್ವಿಕೆಗೆ ಒಳಪಟ್ಟಿತ್ತು. ಹೊಯ್ಸಳರ ಕಾಲದಲ್ಲೂ ಹೊಂಗನೂರು ಹೊಯ್ಸಳರ ಉಪದಂಡನಾಯಕನ ಸೇನಾನೆಲೆಯಾಗಿ ಪ್ರಸಿದ್ಧಿಗೆ ಬಂದಿತು. ಇಲ್ಲಿನ ಸುತ್ತಮುತ್ತಲ ಹಳ್ಳಿಗಳಲ್ಲಿರುವ ಅಸಂಖ್ಯಾತ ವೀರಗಲ್ಲುಗಳು ಆಳರಸರ ಸೇವೆಗೆ, ಇಲ್ಲಿನ ಸ್ಥಳೀಯ ಸೈನ್ಯಕ್ಕೆ ನೇಮಕವಾಗಿಯೇ ಅಥವಾ ಹಿರಿಯ ಪಾಳೇಯ ದಂಡನಾಯಕ ಹೊಂಗನೂರನ್ನು ಉಪರಾಜಧಾನಿಯನ್ನಾಗಿ ಮಾಡಿಕೊಂಡು ಇಲ್ಲಿ ವಾಸ್ತವ್ಯ ಹೂಡಿದ್ದನು. ಕಳಲೆನಾಡ ಮಹಾಪ್ರಭು ಕಿಟ್ಟೇಗೌಡ ಮತ್ತು ಅವನ ಮಗ ಮಂಜಪ್ಪಗೌಡ ೧೪೧೪ರಲ್ಲಿ ಮಳೂರುಪಟ್ಟಣವನ್ನು ತನ್ನ ಕೇಂದ್ರವನ್ನಾಗಿ ಮಾಡಿಕೊಂಡಿದ್ದನು.

"೧೪೧೬ರ ಮಾಕಳಿ ಶಾಸನವು ತಾಳಗೌಡ ಎಂಬುವವನು ಕೆರೆಯೊಂದನ್ನು ಕಟ್ಟಿಸಿ ದತ್ತಿಬಿಟ್ಟ ವಿಚಾರವನ್ನು

೭. ಎಪಿಗ್ರಾಫಿಯ ಕರ್ನಾಟಕ ಸಂ. ೯, ಚನ್ನಪಟ್ಟಣ, ಪು. ೩೧೨
೮. ಅದೇ. ಪು. ೩೧೨ ರಿಂದ ೩೨೪
೯. ಅದೇ. ಪು. ೩೪೫ ನಂ. ೧೬೭
೧೦. ಅದೇ. ಪು. ೩೪೩ ನಂ. ೧೫೯

ಉಲ್ಲೇಖಿಸಿವೆ[೧೧]. ಗರಕಳ್ಳಿ ಶಾಸನದಲ್ಲಿ ವಿಜಯನಗರದ ಅರಸ ದೇವರಾಯನ ವಿಚಾರವನ್ನು ಉಲ್ಲೇಖಿಸುವ ವೀರಗಲ್ಲು ಇದೆ. ಸಾಳ್ವ ನರಸಿಂಹನು ಅಧಿಕಾರಿ ವರದರಾಜದೇವ ಎಂಬುವವನು ಗೌಡಹಳ್ಳಿಮಠಕ್ಕೆ ದತ್ತಿಬಿಟ್ಟ ವಿಚಾರವನ್ನು ಚಿಕ್ಕಲೂರು ಶಾಸನ ಉಲ್ಲೇಖಿಸಿದೆ. "೧೪೯೯ರ ಕೋಡಂಬಳ್ಳಿ ಶಾಸನ"[೧೨]ವು ಎರಡನೇ ನರಸಿಂಹನ ಕಾರ್ಯಕರ್ತನಾದ ನರಸನಾಯಕನು ಮಲ್ಲೇಶ್ವರ ದೇವಾಲಯಕ್ಕೆ ದತ್ತಿ ಬಿಟ್ಟ ವಿಚಾರವನ್ನು ಪ್ರಸ್ತಾಪಿಸುತ್ತದೆ.

ಕೃಷ್ಣದೇವರಾಯನ ಕಾಲದಲ್ಲಿ ವೈಷ್ಣವ ಧರ್ಮದ ಪ್ರಮುಖ ಕೇಂದ್ರವಾಗಿ ಅಬ್ಬೂರು, ಬ್ರಹ್ಮಣೀಪುರ, ಮಳೂರು ಪ್ರಸಿದ್ಧಿಗೆ ಬಂದವು. ಅಬ್ಬೂರಿನಲ್ಲಿ ವ್ಯಾಸತೀರ್ಥರು. ಮಾಧ್ವ ಪರಂಪರೆಗೆ ಅಡಿಗಲ್ಲನ್ನು ಹಾಕಿ ಅದರ ಸಾರೋದ್ಧಾರಕ್ಕಾಗಿ ಹಲವೆಡೆ ಮಠಗಳನ್ನು ಸ್ಥಾಪಿಸಿದರು. ಕೃಷ್ಣದೇವರಾಯನ ಚನ್ನಪಟ್ಟಣದ ಇರಪ್ಪದೇವನೆಂಬುವವನು 'ಕೃಷ್ಣಸಮುದ್ರ' ಎಂಬ "ಚಕ್ಕೆರೆಯ ತಿರುಮಲ ದೇವಸ್ಥಾನವನ್ನು ಅಚ್ಯುತರಾಯನು ದುರಸ್ತಿಗೊಳಿಸಿದ ವಿಚಾರವನ್ನು "೧೫೩೪ರ ಶಾಸನ ತಿಳಿಸುತ್ತದೆ. ಮೊಗೇನಹಳ್ಳಿಯ ನಂಜುಡೇಶ್ವರ ದೇವಾಲಯಕ್ಕೂ ದಾನಬಿಟ್ಟ ವಿಚಾರವನ್ನು ೧೫೩೮ರ ಶಾಸನ ಉಲ್ಲೇಖಿತವಾಗುತ್ತದೆ"[೧೩]. "ವಿಜಯನಗರದ ಕೊನೆಯ ಅರಸ ರಾಮರಾಯನ ಸಹೋದರ ತಿರುಮಲನು ೧೫೭೭ರಲ್ಲಿ ಮಳೂರಿನ ಬ್ರಾಹ್ಮಣರಿಗೆ ಪೆನುಗೊಂಡೆಯಲ್ಲಿ ಆಳ್ವಿಕೆ ನಡೆಸುತ್ತಿದ್ದನು.

### ಚನ್ನಪಟ್ಟಣದ ಪಾಳೆಗಾರರು

ಚನ್ನಪಟ್ಟಣವನ್ನು ತಮ್ಮ ಮುಖ್ಯ ಕೇಂದ್ರವನ್ನಾಗಿ ಮಾಡಿಕೊಂಡು ಆಳಿದವರಲ್ಲಿ ಚನ್ನಪಟ್ಟಣದ ಪಾಳೆಗಾರರು ಪ್ರಮುಖರು. ಇವರು ೧೬-೧೭ನೇ ಶತಮಾನದಲ್ಲಿ ಪೆನುಗೊಂಡೆಯ, ವಿಜಯನಗರದ ಸಂತತಿಯವರ ಸಾಮಂತರಾಗಿ ಆಳ್ವಿಕೆ ನಡೆಸಿದರು. ಮೂಲತಃ ಇವರು ಬಾರಾಮಹಲ್ ಪ್ರದೇಶಕ್ಕೆ ಸೇರಿದ ತೆಲುಗು ಬಣಜಿಗ ವಂಶಸ್ಥರು.

ಈ ವಂಶದ ಮೂಲಪುರುಷ ರಾಣೋಜಿರಾಯ, ಅಂದರೆ ೧೯೨೩ಕ್ಕೆ ಸೇರಿದ ಶಾಸನದಲ್ಲಿ ಚನ್ನಪಟ್ಟಣ ಪಾಳೆಯಗಾರರ ಅನುಕ್ರಮ ವಂಶಾವಳಿಯ ಉಲ್ಲೇಖವಿದೆ. ಅದರ ಪ್ರಕಾರ, ರಾಣಪೆದ್ದ ಜಗದೇವರಾಯ, ಜಗದೇವರಾಯ, ಇಮ್ಮಡಿಕುಮಾರ ಜಗದೇವರಾಯ, ಆಳ್ವಿಕೆ ನಡೆಸಿದರು. ಇವರು ಕ್ರಿ.ಶ. ೧೫೭೦ರಿಂದ ೧೬೩೦ರ ವರೆಗೆ ಅಂದರೆ ಸುಮಾರು ೬೦ ವರ್ಷಗಳ ಕಾಲ ಮಾತ್ರ ಚನ್ನಪಟ್ಟಣ ರಾಜ್ಯದ ಪಾಳೆಯಗಾರರಾಗಿದ್ದರು. ವಿಜಯನಗರದ ಭಂಡಾರ ತಿಮ್ಮಪ್ಪಯ್ಯ ಕೆಲಕಾಲ ಇದರ ಉಸ್ತುವಾರಿ ನಡೆಸಿದ್ದನು. ಚನ್ನಪಟ್ಟಣ ರಾಜ್ಯವು ಈಗಿನ ಚನ್ನಪಟ್ಟಣ ತಾಲ್ಲೂಕುಗಳನ್ನೊಳಗೊಂಡಂತೆ ನಾಗಮಂಗಲ 'ಮಂಡ್ಯಜಿಲ್ಲೆ' ಮತ್ತು ಮದ್ದೂರು ತಾಲ್ಲೂಕಿನ ಕೆಲವು ಭಾಗಗಳನ್ನು ಒಳಗೊಂಡಿತ್ತು.

'ಓಬಳಪುರಾಣ' ಪೊನ್ನಟೋಟಿ, ಓಬಳಕವಿಯ ಕೃತಿ ಹಾಗೂ ಶಾಸನಗಳಲ್ಲಿ ಉಲ್ಲೇಖಿತವಾಗಿರುವಂತೆ ೧೫೭೦ರಲ್ಲಿ ಇಮ್ಮಡಿ ಜಗದೇವರಾಯನು ಇದರ ಪ್ರಥಮ ಆಡಳಿತಗಾರ ಎಂದು ಉಲ್ಲೇಖ ಇದೆ. ಇವನ ತಂದೆ

---

೧೧. ಎಪಿಗ್ರಾಫಿಯ ಕರ್ನಾಟಕ ಸಂ. ೯, ಚನ್ನಪಟ್ಟಣ, ಪು. ೩೪೬

೧೨. ಅದೇ. ಪು. ೩೧೬

೧೩. ಅದೇ. ಪು. ೩೨೪

ಮತ್ತು ತಾತ ತಿಮ್ಮನಾಯಕ ವಿಜಯನಗರ ಅರಸರ ಅಧಿಕಾರಿಗಳಾಗಿ ಸೇವೆ ಸಲ್ಲಿಸಿದ್ದರು. ಇವರು ವಿಜಯನಗರದ ಭಂಡಾರಿ ತಿಮ್ಮಪ್ಪಯ್ಯನ ವಂಶಕ್ಕೆ ಸೇರಿದವರಾಗಿರಬೇಕು, ಭಂಡಾರಿ ತಿಮ್ಮಪ್ಪಯ್ಯ ೧೫೩೦ರ ಸಂದರ್ಭದಲ್ಲಿ ಇವರ ಆಡಳಿತವನ್ನು ನಿರ್ವಹಿಸಲು ನೇಮಕಗೊಂಡಿದ್ದ. ತಿಮ್ಮಪ್ಪನಾಯಕ ಅಥವಾ ಜಗದೇವರಾಯ ಎಂಬುವವನು ನಾಗಮಂಗಲ ಪ್ರದೇಶದ ಅಧಿಕಾರಿಯಾಗಿ ೧೫೬೩ರಲ್ಲಿ ಇದ್ದುದನ್ನು "ನಾಗಮಂಲ ಶಾಸನ"[೧೪] ಉಲ್ಲೇಖಿಸುತ್ತದೆ. ಪೆದ್ದ ಜಗದೇವರಾಯ ಎಂಬುವವನು ಮಂಡ್ಯ ಪ್ರದೇಶದ ಮೇಲ್ವಿಚಾರಣೆಗೆ ವಿಜಯನಗರದ ಅರಸರನ್ನು ನೇಮಿಸಿದ್ದರೆಂಬ ವಿಚಾರ ಶಾಸನವೊಂದರಲ್ಲಿ ಉಲ್ಲೇಖ ಇದೆ. ಈತನ ಸಹೋದರ ಇಮ್ಮಡಿ ಜಗದೇವರಾಯ ಇವನೇ ಚನ್ನಪಟ್ಟಣ ರಾಜ್ಯದ ಸ್ವತಂತ್ರ ಪಾಳೆಯಗಾರನಾಗಿ ಆಳ್ವಿಕೆ ನಡೆಸಿದ. ಇವನು ೧೫೭೦ರಿಂದ ೧೫೮೫ರ ವರೆಗೆ ಸುಮಾರು ೧೫ ವರ್ಷಗಳ ಕಾಲ ಆಡಳಿತ ನಡೆಸಿದನು.

ಇಮ್ಮಡಿ ಜಗದೇವರಾಯ ಗೋಲ್ಕೊಂಡ ಮತ್ತು ಅಹ್ಮದ್‌ನಗರದ ಸೈನಿಕರು ಪೆನುಗೊಂಡೆಯ ಮೇಲೆ ದಾಳಿ ಮಾಡಿದಾಗ ಧೈರ್ಯದಿಂದ ಹೋರಾಡಿ ಹಿಮ್ಮೆಟ್ಟಿಸಿದ. ಆಗ ವಿಜಯನಗರದ ಅರಸ ತಿಮ್ಮರಾಯ ೯ ಲಕ್ಷ ಪಗೋಡಗಳ ಆದಾಯವುಳ್ಳ ದೊಡ್ಡ ಪ್ರದೇಶವನ್ನು ಜಗದೇವರಾಯನಿಗೆ ಸಮರ್ಪಿಸಿದ. ಈ ಪ್ರದೇಶ ಬಾರಾಮಹಲ್‌ನಿಂದ ಪಶ್ಚಿಮ ಘಟ್ಟದವರೆಗೆ ವ್ಯಾಪಿಸಿದ್ದ ಪಿರಿಯಪಟ್ಟಣ ಕಾನಕಾನಹಳ್ಳಿ ಮತ್ತು ಬೂದಿಹಾಳು ಪ್ರದೇಶಗಳು ಸೇರಿದ್ದವು. ಹೊಸದಾಗಿ ಪಡೆದ ಈ ಪ್ರದೇಶಗಳ ಆಡಳಿತವನ್ನು ನಿರ್ವಹಿಸಲು ಚನ್ನಪಟ್ಟಣವನ್ನು ತನ್ನ ಕೇಂದ್ರಸ್ಥಳವನ್ನಾಗಿ ಆಯ್ಕೆ ಮಾಡಿಕೊಂಡು ಅದನ್ನೇ ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ಇಲ್ಲಿ ಕೋಟೆಯನ್ನು ಕಟ್ಟಿಸಿ ಅದರ ರಕ್ಷಣೆಯನ್ನು ಕೈಗೊಂಡನು.

ಜಗದೇವರಾಯ 'ಚನ್ನಪಟ್ಟಣ' ರಾಜ್ಯಕ್ಕೆ ಒಂದು ವ್ಯವಸ್ಥಿತ ಸ್ವರೂಪ ತಂದುಕೊಟ್ಟು ಆ ಮೂಲಕ ಕೋಟೆಯನ್ನು ಭದ್ರಪಡಿಸಿದ. ಇವನ ನಂತರ ಇವನ ಮಗ ಜಗದೇವ ಅಧಿಕಾರಕ್ಕೆ ಬಂದ. ಈತ ಹತ್ತು ವರ್ಷಗಳ ಕಾಲ ಆಳ್ವಿಕೆ ನಡೆಸಿದ. ಇವನ ನಂತರ ವೆಂಕಟಪತಿ ಎಂಬುವವನು ಆಳ್ವಿಕೆ ನಡೆಸಿದನೆಂದು ಶಾಸನವೊಂದು ಉಲ್ಲೇಖಿಸಿದೆ. ಇಮ್ಮಡಿ ಕುಮಾರ ಜಗದೇವರಾಜ ೧೬೨೦ರಿಂದ ೧೬೨೯ರ ವರೆಗೆ ಆಳ್ವಿಕೆ ನಡೆಸಿದ. ಇವನು ಕನಕಪುರ ತಾಲ್ಲೂಕಿನ ಅರಳಾಳುಸಂದ್ರದ ಶಿವದೇವಾಲಯಕ್ಕೆ ದತ್ತಿಕೊಟ್ಟ ವಿಚಾರವನ್ನು "ಸೋಗಾಲ ಶಾಸನ"[೧೫]ವೊಂದು ಉಲ್ಲೇಖಿಸಿದೆ. ೧೬೩೦ರಲ್ಲಿ ಮೈಸೂರಿನ ಚಾಮರಾಜ ಒಡೆಯರ್ ಶಾಸನವೊಂದು ಉಲ್ಲೇಖಿಸಿದೆ. ೧೬೩೦ರಲ್ಲಿ ಮೈಸೂರಿನ ಚಾಮರಾಜ ಒಡೆಯರ್ ಚನ್ನಪಟ್ಟಣ ರಾಜ್ಯವನ್ನು ಮುತ್ತಿ ವಶಪಡಿಸಿಕೊಂಡ ನಂತರ ಚನ್ನಪಟ್ಟಣ ಪಾಳೆಯಗಾರರ ಆಳ್ವಿಕೆ ಕೊನೆಗೊಂಡಿತು.

ಚನ್ನಪಟ್ಟಣ ಪಾಳೆಯಗಾರರು ಇಲ್ಲಿನ ದೇವಾಲಯಗಳಿಗೆ ದಾನದತ್ತಿ ಕೊಟ್ಟರಲ್ಲದೆ ಅವುಗಳನ್ನು ಜೀರ್ಣೋದ್ಧರಿಸಿದರು. ಚನ್ನಪಟ್ಟಣದ ಕೋದಂಡರಾಯ ದೇವಸ್ಥಾನ ಈ ಅವಧಿಯಲ್ಲಿ ನಿರ್ಮಾಣಗೊಂಡಿತು.

---

೧೪. ಎಪಿಗ್ರಾಫಿಯ ಕರ್ನಾಟಕ ಸಂ. ೯, ಚನ್ನಪಟ್ಟಣ, ಪು. ೧೧೫, ೧೧೬

೧೫. ಎಪಿಗ್ರಾಫಿಯ ಕರ್ನಾಟಕ ಸಂ. ೯, ಚನ್ನಪಟ್ಟಣ, ಸೋಗಾಲದ ಶಾಸನ, ಪು. ೩೧೨, ೩೧೩, ೩೧೯

ಮಳೂರಿನ ಅಪ್ರಮೇಯಸ್ವಾಮಿ ದೇವಸ್ಥಾನದಲ್ಲಿ ಜಗದೇವರಾಯನ ಹೆಂಡತಿಯ ಮೂರ್ತಿ ಇದೆ. ಜಗದೇವರಾಯನಿಂದ ನಿರ್ಮಿಸಲ್ಪಟ್ಟ ಕೋಟೆ ಈಗ ಸಂಪೂರ್ಣ ನಾಶವಾಗಿದೆ. ಸಾಹಿತ್ಯಿಕವಾಗಿಯೂ ಚನ್ನಪಟ್ಟಣದ ಪಾಳೆಯಗಾರರು ಪ್ರೋತ್ಸಾಹವಿತ್ತಿದ್ದರು. ಇಮ್ಮಡಿ ಜಗದೇವರಾಯನ ಆಸ್ಥಾನ ಕವಿ ತಿಬಳಕವಿ ಎಂಬಾತ 'ವಾಮನಪುರಾಣ'ವನ್ನು ರಚಿಸಿದ್ದಾನೆ. ಆತನೆ ಸ್ವತಃ ಕವಿಯಾಗಿದ್ದು, ಸಂಸ್ಕೃತದಲ್ಲಿ 'ಉತ್ತಾರನೈಷದ' ಮತ್ತು 'ಅಧ್ಯಾತ್ಮರಾಮಾಯಣ' ಎಂಬ ಗ್ರಂಥಗಳನ್ನು ರಚಿಸಿರುವನು. ಚಂಡಿಕರತಮಂ ಈತನ ತೆಲುಗು ಕೃತಿ, ಅಂಕುಶೇಂದ್ರನಿಂದ ಪೋಷಿಸಲ್ಪಟ್ಟ 'ರೆವುರಿ ಏಕಾಂಬರನಾಥ ಮುಂತಾದ ಕವಿಗಳಿಗೆ ಇವರು ಪ್ರೋತ್ಸಾಹ ಕೊಟ್ಟಿದ್ದರು. ಚಾವಲಿ ರಾಮಸ್ವಾಮಿ ಹೊಸಗನ್ನಡ ಸಾಹಿತ್ಯದ ಬಗ್ಗೆ ಛಂದಸ್ಸನ್ನು ಕುರಿತು ಬರೆದುದು ಇದೇ ಅವಧಿಯಲ್ಲಿ.

ಚಾಮರಾಜ ಒಡೆಯರು ಚನ್ನಪಟ್ಟವನ್ನು ವಶಪಡಿಸಿಕೊಂಡ ನಂತರ ಚನ್ನಪಟ್ಟಣ ರಾಜ್ಯ ಮೈಸೂರು ಸಂಸ್ಥಾನದಲ್ಲಿ ವಿಲೀನಗೊಂಡಿತು. ನಂತರ ಹೈದರ್‌ಅಲಿ ಮತ್ತು ಟಿಪ್ಪು ಅವರ ಆಳ್ವಿಕೆಗೆ ಒಳಪಟ್ಟಿತು. ೧೭೯೨ರಲ್ಲಿ ಗೋಪಾಲಹರಿಯ ಮುಖಂಡತ್ವದಲ್ಲಿದ್ದ ಮರಾಠಸೇನೆ ಇಲ್ಲಿನ ಕೋಟೆಯನ್ನು ನಾಶಪಡಿಸಿತು. ದಿವಾನ್ ಪೂರ್ಣಯ್ಯ ಕೋಟೆಯನ್ನು ದುರಸ್ತಿಗೊಳಿಸಿದ, ಹೈದರಾಲಿ ಕೂಡ್ಲೂರು ಗ್ರಾಮವನ್ನು ಅಖಿಲ್‌ಷಾ ಖಾದ್ರಿ ಎಂಬಾತನಿಗೆ ದತ್ತಿ ಕೊಟ್ಟಿದ್ದನು. ಹೈದರಾಲಿಯ ಗುರು ಅಕ್ಬಲ್‌ಷಾ ಖಾದ್ರಿ ಇಲ್ಲಿ ನೆಲೆಸಿದ್ದನು. ಈತನ ಗೋರಿಯು ಇಲ್ಲಿದೆ. ಇವರ ನಂತರ ಮುಮ್ಮಡಿ ಕೃಷ್ಣರಾಜ ಒಡೆಯರ ಭಾವಮೈದುನ ತಿಮ್ಮಪ್ಪರಾಜ ಇಲ್ಲಿ ಆಳ್ವಿಕೆ ನಡೆಸಿ ಅರಮನೆಯೊಂದನ್ನು ಕಟ್ಟಿಸಿದ. ಹೈದರಾಲಿ ಸೈಯದ್‌ವಾಡಿಯಲ್ಲಿ ಜಾಮಿಮಸೀದಿ ನಿರ್ಮಿಸಿದನು. ಬಡಮಖಾನ್ ದರ್ಗಾಗಳು ಈತನ ಕಾಲಕ್ಕೆ ಸೇರಿದ್ದವು.

ಹೈದರ್‌ಅಲಿಯ ಮತ್ತು ಬ್ರಿಟಿಷರ ಕಾಲದ ಆಡಳಿತ ಪ್ರಧಾನವಾಗಿ ಪ್ರಮುಖ ಪಾತ್ರವಹಿಸಿತ್ತು. ಹೈದರಾಲಿಯ ಮತ್ತು ಟಿಪ್ಪುವಿನ ಅಧಿಕಾರಿಗಳು ಇಲ್ಲೇ ವಾಸ್ತವ್ಯ ಹೂಡಿದ್ದರು. ೧೮೭೩ರಲ್ಲಿ ಕ್ಲೋಸ್‌ಪೇಟೆಯನ್ನು (ಇಂದಿನ ರಾಮನಗರ) ಉಪತಾಲ್ಲೂಕನ್ನಾಗಿ ಮಾಡಲಾಯಿತು. ೧೮೯೨ರಲ್ಲಿ ಕ್ಲೋಸ್‌ಪೇಟೆಯೇ ಚನ್ನಪಟ್ಟಣದ ಉಪತಾಲ್ಲೂಕನ್ನಾಗಿ ಮಾಡಲಾಯಿತು. ಬೆಂಗಳೂರು, ಮೈಸೂರು ರಸ್ತೆಯಲ್ಲಿ ಇತರೆ ಯಾವುದೇ ತಾಲ್ಲೂಕು ಹೊಂದಿರದ ಸವಲತ್ತುಗಳನ್ನು ಹೊಂದಿ ಸರ್ಕಾರದ ವಿವಿಧ ಆಡಳಿತಾತ್ಮಕ ಕಛೇರಿಗಳು ತೆರೆಯಲ್ಪಟ್ಟವು.

ಈ ತಾಲ್ಲೂಕು ಕೈಗಾರಿಕೆಯಲ್ಲಿ ಸ್ವಲ್ಪ ಹಿಂದೆ ಇದೆ. ಚನ್ನಪಟ್ಟಣ ಬೊಂಬೆಯ ನಗರಿಯೆಂದು ಪ್ರಸಿದ್ಧವಾಗಿದೆ. ರಾಜ್ಯದ ಸಾಗರ ತಾಲ್ಲೂಕ್ ಶ್ರೀಗಂಧದ ಕೆತ್ತನೆ ಕೆಲಸಗಳಿಗೆ ಪ್ರಸಿದ್ಧವಾಗಿದ್ದರೆ, ಚನ್ನಪಟ್ಟಣ ಮರದ ಆಟಿಕೆಗಳಿಗೆ ಪ್ರಸಿದ್ಧಿಯಾಗಿದೆ. ಚನ್ನಪಟ್ಟಣದ ಗೊಂಬೆಗಳು ತಮ್ಮ ಸೌಂದರ್ಯ, ವೈವಿಧ್ಯತೆ ಮತ್ತು ಉತ್ತಮ ಗುಣಮಟ್ಟದಿಂದಾಗಿ ಆಬಾಲವೃದ್ಧರಾದಿಯಾಗಿ ಎಲ್ಲರನ್ನು ಆಕರ್ಷಿಸುತ್ತದೆ. ಇಲ್ಲಿನ ಗೊಂಬೆಗಳ ಸೌಂದರ್ಯಕ್ಕೆ ಮಾರುಹೋದ ಪ್ರಸಿದ್ಧ ಕವಿ ಜಿ.ಪಿ. ರಾಜರತ್ನಂ ಹೀಗೆ ಹಾಡಿ ಹೊಗಳಿದ್ದಾರೆ.

ಚನ್ನಪಟ್ಟದ ಬಣ್ಣದ ಗೊಂಬೆ
ಚಿನ್ನದ ಹಾಗೆ ಹೊಳೆಯುವ ಗೊಂಬೆ

ರನ್ನದ ಹಾಗೆ ಮಿನುಗುವ ಗೊಂಬೆ

ಕಣ್ಣನು ಮಿಟುಕಿಸಿ ಆಡುವ ಗೊಂಬೆ[೧೭] ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ, ಪು.

ಎಂದು ಗೊಂಬೆಗಳ ಬಗ್ಗೆ ತುಂಬಾ ವರ್ಣಿಸಿದ್ದಾರೆ.

ಲಲಿತ ಕಲೆಗಳ ದೃಷ್ಟಿಯಿಂದ ನೋಡಿದರೆ ಕರ್ನಾಟಕ ಶ್ರೀಮಂತ ನಾಡೆಂದೇ ಹೇಳಬೇಕು. ಅದು ತನ್ನ ಮಡಿಲಲ್ಲಿ ಹೆಜ್ಜೆಹೆಜ್ಜೆಗೂ ಸಮೃದ್ಧವಾದ ಕಲಾ ಸಾಮ್ರಾಜ್ಯವನ್ನೇ ಅಡಗಿಸಿಟ್ಟುಕೊಂಡಿದೆ. ಅಂತಯೇ ರಾಮನಗರ ಜಿಲ್ಲೆಯಲ್ಲಿ ಕೂಡ ಕರ್ನಾಟಕ ಚಿತ್ರಕಲಾ ಪ್ರಪಂಚಕ್ಕೆ ತನ್ನದೇ ಆದ ಮಹತ್ವದ ಕೊಡುಗೆಯನ್ನು ನೀಡಿದೆ. ಈ ವಿಭಾಗದಲ್ಲಿ ಚನ್ನಪಟ್ಟಣ ತಾಲ್ಲೂಕು ಕೇಂದ್ರವಿದ್ದು ಪ್ರತಿಯೊಂದು ಕೂಡ ತನ್ನ ಐತಿಹಾಸಿಕ ಹಿನ್ನೆಲೆಗನುಗುಣವಾಗಿ ಚಿತ್ರಕಲೆ ತನ್ನ ಕಾಣಿಕೆ ನೀಡಿದೆ. ಈಗಲೂ ನೀಡುತ್ತಿದೆ. ಈ ಭಾಗದಲ್ಲಿ ಚಿತ್ರಕಲೆ ಇತಿಹಾಸ ಪೂರ್ವ ಕಾಲದಿಂದಲೇ ಪ್ರಾರಂಭವಾಗಿ ಸಮೃದ್ಧವಾಗಿಯೂ ಶ್ರೀಮಂತವಾಗಿಯೂ ಕಾಲಕಾಲಕ್ಕೆ ವಿಕಾಸಗೊಂಡು, ಹಲವಾರು ತೀವ್ರ (ಬದಲಾವಣೆ)ಗಳನ್ನು ಪಡೆದುಕೊಂಡು ಇಂದಿನವರೆಗೂ ಜೀವನದಿಯಂತೆ ಅವಿಚ್ಛಿನ್ನವಾಗಿ ಪ್ರವಹಿಸಿಕೊಂಡು ಮುಂದುವರೆಯುತ್ತಿರುವುದನ್ನು ಗಮನಿಸಬಹುದು.

ಆದಿಮಾನವನಿಗೆ ಗುಹೆಯೇ ವಾಸಸ್ಥಾನವಾಗಿತ್ತು. ಅವನು ಗುಹೆಯಲ್ಲಿ ವಾಸಿಸುವಾಗಲೋ ಅಥವಾ ನಿರಾಳವಾಗಿರುವ ಹೊತ್ತಿನಲ್ಲೋ ಹುಗೆಯ ಗೋಡೆಯಲ್ಲಿ ಈಗಾಗಲೆ ಅವನಿಗೆ ಗೊತ್ತಿರುವ ಪ್ರಾಣಿ ಪಕ್ಷಿಗಳ ರೂಪ. ಆಕಾರಗಳು ಅವನ ಮನಕಲಕಿರಬೇಕು. ಹಾಗೇ ಗೋಡೆಯ ಮೇಲೆ ಕೈಯಾಡಿಸಿದಾಗ ಅದರ ಉಬ್ಬು ತಗ್ಗುಗಳು ಆ ಪ್ರಾಣಿಯ ಮೈಮಾಟದ ನೆನಪು ತಂದಿರಬಹುದು. ಕೆಲಕಾಲ ಅದನ್ನು ಕೈಯಿಂದ ಸವರಿದಾಗೆಲ್ಲಾ ಮತ್ತೆ ಮತ್ತೆ ಅದೇ ಭಾವನೆ ಕಾಡಿರಬಹುದು. ಎದುರಿಗಿದ್ದ ಬೆಂಕಿಕುಂಡಲದಲ್ಲಿನ ಇದ್ದಿಲಿನಿಂದ ಬಂಡೆಯುಬ್ಬಿನ ಕೈಯೇಳೆದಾಗ ಅಸ್ಪಷ್ಟ ಆಕಾರ, ತಾನು ಕಂಡಿದ್ದಾ ಪ್ರಾಣಿಯ ಚಿತ್ರ ಮೂಡಿರಬೇಕು. ಹೀಗೆ ಆದಿಮಾನವನ ಮೊಟ್ಟಮೊದಲು ಬಾರಿಗೆ ಚಿತ್ರಿಸಲಾರಂಭಿಸಿದ, ಕೃಷಿ ಪಶುಪಾಲನೆ ತಿಳಿದಿರದ ಸ್ಥಿರ ಜೀವನ ಗೊತ್ತಿಲ್ಲದ ಅವನಿಗೆ ಗೆಡ್ಡೆಗೆಣಸುಗಳನ್ನು ಸಂಗ್ರಹಿಸುವುದು. ಪ್ರಾಣಿ ಪಕ್ಷಿ ಮೀನುಗಳನ್ನು ಬೇಟೆಯಾಡಿ ತಿನ್ನುವುದೇ ಜೀವನ ಮಾರ್ಗವಾಗಿತ್ತು. ಇದೇ ಇವನ ಚಿತ್ರಕಲೆಯ ವಸ್ತುವಿಷಯವೂ ಆಗಿದ್ದು ಅಚ್ಚರಿಯೇನಲ್ಲ. ಈ ಚಿತ್ರಗಳನ್ನು ಅವನು ತನ್ನ ಜೊತೆಯಲ್ಲಿರುವ ಇತರರಿಗೆ ತೋರಿಸಿದಾಗ ಅಚ್ಚರಿ ಮತ್ತು ಸಂತೋಷ ವ್ಯಕ್ತಪಡಿಸಿದ್ದಾರೆ ಅವರೂ ಕೂಡ ತಾವು ಕಂಡ ಪ್ರಾಣಿಗಳ ಚಿತ್ರಗಳನ್ನು ಗುಹೆಯ ಗೋಡೆಯ ಮೇಲೆ ಚೂಪಾದ ಕಲ್ಲಿನಿಂದ ಕುಟ್ಟಿಯೋ ಗೀರಿಯೋ ಚಿತ್ರಿಸಿದ್ದಾರೆ. ಈ ಇತಿಹಾಸದಲ್ಲಿನ ಮೊದಲ ಪೇಂಟಿಂಗ್‌ಗಳು ಆದಿಮಾನವನೇ (ಬೇಟೆಗಾರ) ಮೊದಲ ಚಿತ್ರಕಲಾವಿದ. ಈ ರೀತಿಯ ಚಿತ್ರಗಳು ಜಗತ್ತಿನಾದ್ಯಂತ ಹಲವಾರು ದೇಶಗಳಲ್ಲಿರುವುದನ್ನು ಗುರುತಿಸಬಹುದು. ಈಗಿನ ಚನ್ನಪಟ್ಟಣ ತಾಲೂಕು ಕೂಡ ಶಿಲಾಯುಗ, ನವಶಿಲಾಯುಗ ಬೃಹತ್ ಶಿಲಾಯುಗದ ಆದಿಮಾನವರು,

---

೧೭. ಅರ್ಕಾವತಿ ಸ್ಮರಣ ಸಂಚಿಕೆ, ಅಖಿಲ ಭಾರತ ೬೭ನೇ ಕನ್ನಡ ಸಾಹಿತ್ಯ ಸಮ್ಮೇಳನ, ಕನಕಪುರ (ಸಂ) ಎಂ. ಭೈರೆಗೌಡ, ಕಾ.ಸಿ. ತಿಮ್ಮಯ್ಯ, ಪು. ೨೪೫

ಇದ್ದರೆಂಬುದಕ್ಕೆ ಪುರಾತತ್ವ ಶೋಧನೆಯಿಂದ ದೊರತಿರುವ ಕುರುಹುಗಳು ಸಮರ್ಥಿಸುತ್ತಲೆ, ಅವರು ರಚಿಸಿರುವ ಗುಹಾಚಿತ್ರಗಳಿರುವ ನೆಲೆಗಳು ದೊರೆತಿರುವುದು ಈ ಅಂಶವನ್ನು ಮತ್ತಷ್ಟು ದೃಢಗೊಳಿಸುತ್ತವೆ. ಚನ್ನಪಟ್ಟಣ ತಾಲೂಕಿನ ಪ್ರಪ್ರಥಮ ಇತಿಹಾಸ ಪೂರ್ವಕಾಲದ ನೆಲೆಯಿಂದಲೆ ಚನ್ನಪಟ್ಟಣಕ್ಕೆ ಸ್ವಲ್ಪ ದೂರದ ಪುಟ್ಟಪ್ಪನ ದೊಡ್ಡಿಯ ಬಳಿಯಿದೆ, ದೊಡ್ಡಿಯ ಹಿಂಭಾಗಕ್ಕೆ ಅಂದರೆ ಪೂರ್ವದಿಕ್ಕಿನಲ್ಲಿ ಬೃಹದಾಕಾರದ ಎರಡು ಬಂಡೆಗಳಿವೆ. ಇವುಗಳಲ್ಲಿ ದೊಡ್ಡ ಬಂಡೆಯ ಪಕ್ಕದಲ್ಲಿರುವ ಸುಮಾರು ಗಾತ್ರದ ಬಂಡೆಯ ಕಲ್ಲಾಸರೆಯಲ್ಲಿ ಇತಿಹಾಸ ಪೂರ್ವಕಾಲದ ಚಿತ್ರಗಳಿವೆ. ಬಾಣದ ಮನಚು, ಮನುಷ್ಯನ ನೀಳ ಚಲನಾಭಂಗಿ, ಪದ್ಮಾಸನದಲ್ಲಿ ಕುಳಿತ ಮನುಷ್ಯ, ಕಾಲು ಇಳಿಬಿಟ್ಟು, ಎಡಗೈ ಮೇಲೆತ್ತಿದ ಮನುಷ್ಯ ಇತ್ಯಾದಿ ಚಿತ್ರಗಳು ಕಲ್ಲಾಸರೆಯ ಸಮತಲ ಮುಖದಲ್ಲಿವೆ. ಜೊತೆಗೆ ಅಲ್ಲೇ ಎರಡು ಛೇದನ ರೂಪ ಚಕ್ರ ಮತ್ತು ನಾಮದಂತಹ ಚಿತ್ರವಿದೆ.

ಹೀಗೆ ಪ್ರಾಗೈತಿಹಾಸಿಕ ಚಿತ್ರಗಳು ನಮ್ಮ ಪ್ರಾಚೀನ ಮಾನವರ ಜೀವನ ವಿಧಾನ ಮತ್ತು ಚಿಂತನೆಯ ಒಂದು ಚಿತ್ರವನ್ನು ನಮಗೆ ನೀಡುತ್ತವೆ. ಈ ಚಿತ್ರಗಳ ಕ್ರಮಬದ್ಧ ಅಧ್ಯಯನ ಸಂಶೋಧನೆಗಳು ಕಲಾಭ್ಯಾಸಿಗಳಿಗೂ ಪುರಾತತ್ವ ಶೋಧಕರಿಗೂ ಅತ್ಯಂತ ಮಹತ್ವದ ಸಾಮಾಗ್ರಿಯನ್ನೊದಗಿಸುತ್ತದೆ ಎಂಬುದರಲ್ಲಿ ಎರಡು ಮಾತಿಲ್ಲ. ಅಲ್ಲದೆ ಅದರಿಂದ ನಮ್ಮ ಚಿತ್ರಕಲೆಯನ್ನು ಬೆಳೆಸಲು ಅಮೂಲ್ಯ ತಾಂತ್ರಿಕ ಜ್ಞಾನವೂ ಸಹ ಲಭ್ಯವಾಗುತ್ತದೆ. ಆದರೆ ಈ ಹಿನ್ನೆಲೆಯಲ್ಲಿ ಚನ್ನಪಟ್ಟಣ ತಾಲೂಕು ಪ್ರಾಗೈತಿಹಾಸಿಕ ಚಿತ್ರಕಲೆಯ ಬಗ್ಗೆ ಇನ್ನೂ ಹೆಚ್ಚಿನ ಅಧ್ಯಯನದ ಕಲಾದೃಷ್ಟಿಯಿಂದ ಪರಿಶೀಲನೆ ನಡೆಯಬೇಕಿದೆ. ಇನ್ನೂ ಅನೇಕ ನೆಲೆಗಳು ಅಜ್ಞಾತವಾಗಿರುವ ಸಾಧ್ಯತೆಯಿದೆ. ಇವುಗಳನ್ನು ಪತ್ತೆ ಹಚ್ಚುವ ಕಾರ್ಯ ಯುವ ಕಲಾವಿದರಿಂದ ಸಂಶೋಧಕರಿಂದ ನಡೆಯಬೇಕಿದೆ.

ಮೈಸೂರು ರಾಜ್ಯದಲ್ಲಿ ಅರಗಿನ ವಸ್ತುಗಳ ತಯಾರಿಕೆ ಸ್ಥಳೀಯವಾಗಿ ಬಹಳ ಪುರಾತನ ಕಾಲದಿಂದಲೂ ಬೆಳೆದುಕೊಂಡು ಬಂದಿದೆ. ಮುಖ್ಯವಾಗಿ ಈ ಕಲೆಯ ಕೇಂದ್ರ ಚನ್ನಪಟ್ಟಣವಾಗಿತ್ತು. ಈ ಕ್ಷೇತ್ರದಲ್ಲಿ ನಿರಪಾರಾದ ಕುಶಲ ಕರ್ಮಿಗಳ ವರ್ಗವನ್ನು ಚಿತ್ರಗಾರರೆಂದು ಕರೆಯುತ್ತಿದ್ದರು. ಚಿತ್ರಗಾರರು ಹಾಳೆ ಅಥವಾ ಈಜಿ ಎಂಬ ಮರವನ್ನು ಉಪಯೋಗಿಸುತ್ತಿದ್ದರು. ಚನ್ನಪಟ್ಟಣದ ಸುತ್ತಮುತ್ತ ಈ ಮರ ಬಂಜರು ಭೂಮಿಯಲ್ಲಿ ವಿಶೇಷವಾಗಿ ಬೆಳೆಯುತ್ತಿತ್ತು. ಮೃದುವಾದ ಮತ್ತು ಒಳ್ಳೆಯ ಹರಳುಗಳನ್ನು ಹೊಂದಿದ್ದ ಈ ಮರ ಕೈಯಿಂದ ನಿರ್ವಹಿಸಬಹುದಾದ ಬಿಲ್ಲಿನಾಕಾರದ ತಿರುಗಣೆಗೆ ಸುಲಭವಾಗಿ ಬಗ್ಗುತಿತ್ತು. ಮರವನ್ನು ದಿಮ್ಮಿಗಳಾಗಿ ಕಡಿದು ಸಿದ್ಧಪಡಿಸುತ್ತಿದ್ದರು. ದೊಡ್ಡ ದೊಡ್ಡ ಕೊಂಬೆಗಳನ್ನು ಚಿಕ್ಕ ಚಿಕ್ಕ ತುಂಡುಗಳಾಗಿ ತಯಾರಿಸುತ್ತಿದ್ದರು. ನಂತರ ತಿರುಗಣೆಗೆ ಕೊಟ್ಟು ಬೇಕಾದ ಆಕಾರಕ್ಕೆ ತಂದು ವಿವಿಧ ಬಣ್ಣದ ಅರಗುಗಳನ್ನು ಅವುಗಳಿಗೆ ಹಚ್ಚುತ್ತಿದ್ದರು. ಹೀಗೆ ಬಣ್ಣ ಹಚ್ಚುವಾಗ ಬಿಲ್ಲಿನಾಕಾರದ ತಿರುಗಣೆಯನ್ನು ಉಪಯೋಗಿಸುತ್ತಿದ್ದರು. ಇದರಿಂದ ಅರಗು ಸುಲಭವಾಗಿ ಕರಗಿ ಬಣ್ಣದ ಆಟದ ಸಾಮಾನುಗಳಿಗೆ ಹರಡಿಕೊಳ್ಳುತ್ತಿದ್ದವು. ಆಟಿಕೆಗಳ ವಿವಿಧ ಭಾಗಗಳಿಗೆ ಸೂಕ್ಷ್ಮವಾದ ಕೈ ಕೌಶಲ್ಯದಿಂದ ವಿವಿಧ ಬಣ್ಣಗಳನ್ನು ಹಚ್ಚಿ ಕಣ್ಣಿಗೆ ಆಕರ್ಷಕವಾಗುವಂತೆ ಮಾಡುತ್ತಿದ್ದರು. ಚನ್ನಪಟ್ಟಣದಲ್ಲಿ ತಯಾರಾದ ಗೊಂಬೆಗಳಿಗೆ ರಾಜ್ಯದ ಎಲ್ಲಾ ವರ್ಗಗಳ ಜನರಿಂದ ಬೇಡಿಕೆಯಿತ್ತು. ಯುರೋಪಿಯನ್ನರನ್ನು ಸಹ ಈ ಗೊಂಬೆಗಳು ಆಕರ್ಷಿಸಿದವು.

ಮಿಂಚುವ ಬಣ್ಣಗಳಿಂದ ಬೆಣ್ಣೆಯ ಮೃದುತ್ವದ ಜೊತೆಗೆ ಕಾಠಿಣ್ಯವನ್ನು ಹೊಂದಿದ್ದ ಈ ಗೊಂಬೆಗಳ ಬಣ್ಣ ಎಂದಿಗೂ ಮಾಸುತ್ತಿರಲಿಲ್ಲ. ಪ್ರಾಣಿಗಳ ದೊಡ್ಡ ದೊಡ್ಡ ಆಕಾರದ ಬೊಂಬೆಗಳನ್ನು ಮೃದುವಾದ ಮರದಿಂದ ತಯಾರಿಸುತ್ತಿದ್ದರು. ಕೈಯಿಂದ ಬಣ್ಣವನ್ನು ಹಚ್ಚುತ್ತಿದ್ದರು. ಹಕ್ಕಿ ಮತ್ತು ಹಣ್ಣುಗಳ ಮಾದರಿ ನಿಸರ್ಗಕ್ಕೆ ಸಮೀಪವಾಗಿತ್ತು.[೧೭]

**ಸಂಗೀತ ವಾದ್ಯಗಳ ತಂತಿ ತಯಾರಿಕೆ**

ವಾದ್ಯಗಳಿಗೆ ಬೇಕಾದ ಉತ್ಕೃಷ್ಟಮಟ್ಟದ ತಂತಿಯನ್ನು ಚನ್ನಪಟ್ಟಣದಲ್ಲಿ ತಯಾರಿಸುತ್ತಿದ್ದರು. ಹೈದರಾಲಿಯ ಕಾಲದಲ್ಲಿ ಚನ್ನಪಟ್ಟಣದಲ್ಲಿ ತಯಾರಿಸುತ್ತಿದ್ದರು. ಹೈದರಾಲಿಯ ಕಾಲದಿಂದಲೂ ಇಲ್ಲಿ ತಯಾರಾದ ತಂತಿಗಳು ಪ್ರಸಿದ್ಧವಾಗಿದ್ದವು. ದೆಹಲಿಗೆ ಹೈದಾರಾಲಿ ಚನ್ನಪಟ್ಟಣದ ತಂತಿಗಳನ್ನು ಕಳುಹಿಸಿ ಕೊಟ್ಟಿದ್ದರಿಂದ ಇದಕ್ಕಾಗಿ ಅಲ್ಲಿ ಬೇಡಿಕೆ ಹೆಚ್ಚಾಗಿತ್ತು. ಇಲ್ಲಿ ತಯಾರಾದ ತಂತಿಯ ವಿಶೇಷಗಳೆಂದರೆ ೧. ಸ್ಥಳದಲ್ಲೇ ತಯಾರಾದ ಉಕ್ಕನ್ನು ಬಳಸಿದ್ದು ೨. ಇದನ್ನು ಹದವಾಗಿ ಕಾಯಿಸಿ ಬಡಿಯುವ ಕೌಶಲ್ಯ.

ಸಣ್ಣಪ್ರಮಾಣದ ಕೈಗಾರಿಕೆಗಳು ರಾಜ್ಯದ ಆರ್ಥಿಕ ವ್ಯವಸ್ಥೆಗೆ ವೈವಿಧ್ಯತೆಯನ್ನು ತಂದುಕೊಡುವುದರ ಜೊತೆಗೆ ಅನೇಕರಿಗೆ ಜೀವನ ಮಾರ್ಗಗಳನ್ನು ಕಲ್ಪಿಸಿಕೊಟ್ಟಿದ್ದವು. ಚನ್ನಪಟ್ಟಣದ ಅರಗಿನ ಮತ್ತು ಮರದ ಆಟಿಕೆಗಳ ತಯಾರಿಕೆಯಂತೂ ಲೋಕ ಪ್ರಸಿದ್ಧವಾಗಿತ್ತು. ಒಟ್ಟಿನಲ್ಲಿ ರಾಜ್ಯದ ಕೈಗಾರಿಕಾಚಿತ್ರ ಯಾಂತ್ರೀಕರಣದ ಪ್ರಭಾವದಿಂದ ದೂರವಿದ್ದರೂ ಕೈಗಳನ್ನೇ ಅವಲಂಬಿಸಿ ಬದುಕುಳಿದಿದ್ದವು.

**ಗಾಜಿನ ಬಳೆಗಳ ತಯಾರಿಕೆ**

ಮತ್ತೋಡು ಮತ್ತು ಚನ್ನಪಟ್ಟಣಗಳಲ್ಲಿ ಗಾಜನ್ನು ತಯಾರಿಸುತ್ತಿದ್ದರು. ಬಳೆಗಳ ತಯಾರಿಕೆಯಲ್ಲಿ ಗಾಜನ್ನು ಉಪಯೋಗಿಸುತ್ತಿದ್ದರು. ಕೆಂಪು, ಹಸಿರು, ಕಪ್ಪು, ನೀಲಿ ಮತ್ತು ಹಳದಿ ಬಣ್ಣದ ಗಾಜುಗಳನ್ನು ತಯಾರಿಸುತ್ತಿದ್ದರು. ಬಳೆಗಳನ್ನು ತಯಾರಿಸುವುದು ರಾಜ್ಯದ ಒಂದು ಕುಶಲ ಕಲೆಯಾಗಿತ್ತು. ಇದಲ್ಲದೇ ಕಿವಿಯ ಆಭರಣಗಳನ್ನು ಗಾಜಿನಲ್ಲಿ ತಯಾರಿಸುತ್ತಿದ್ದರು. ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು, ಮತ್ತೋಡು, ಅನಿವಾಳ, ಬಾಗೆಪಲ್ಲಿ ತಾಲೂಕಿನ ಜಲುಪಾಳ್ಯ ಮೊದಲಾದ ಗ್ರಾಮಗಳು ತುಮಕೂರು ಜಿಲ್ಲೆಯ ತಿಮ್ಮಸಂದ್ರ, ಗಜಲ, ಹೊಸಹಳ್ಳಿ, ಕಟ್ಟಪಲ್ಲಿ, ಕೊರಟಗೆರೆ ಮತ್ತು ಪಾವಗಡಗಳು ಮೈಸೂರು ರಾಜ್ಯದ ಗಾಜಿನ ಬಳೆಗಳ ತಯಾರಿಕೆಯ ಪ್ರಧಾನ ಕೇಂದ್ರಗಳಾಗಿದ್ದವು. ೧೯ನೆಯ ಶತಮಾನದಲ್ಲಿ ಈ ಕೈಗಾರಿಕೆ ಸಮೃದ್ಧವಾಗಿ ಬೆಳೆಯಿತು. ಆದರೆ ೨೦ನೆಯ ಶತಮಾನದ ಆರಂಭದಲ್ಲಿ ರಾಜ್ಯದ ಈ ಕೈಗಾರಿಕೆ ಅವನತಿಯ ಹಾದಿಯನ್ನು ಹಿಡಿಯಿತು. ಅಗ್ಗದ ಉರುವಲಿನ ಅಭಾವ ಇದರ ತಯಾರಿಕೆಗೆ ವಿಶಿಷ್ಟವಾಗಿ ಬೇಕಾದ ಹಾಲ್ಸಲಿ ಎಂಬ ಮಣ್ಣಿನ ಅಭಾವ, ಜಪಾನ ಮತ್ತು ಆಸ್ಟ್ರೇಲಿಯಾಗಳಿಂದ ಕಡಿಮೆ ಬೆಲೆಗಳಲ್ಲಿ ಉತ್ಕೃಷ್ಟಮಟ್ಟದ ಬಳೆಗಳ ಆಮದು ಮಾಡಿಕೊಂಡಿದ್ದು ಈ ಕೈಗಾರಿಕೆಯ

೧೭. ಮೈಸೂರು ರಾಜ್ಯದಲ್ಲಿ ವಾಣಿಜ್ಯ ಮತ್ತು ಕರಕುಶಲ ಕಲೆಗಳು, ಪು. ೩೩

ಅವನತಿಗೆ ಮುಖ್ಯ ಕಾರಣಗಳನ್ನೆಬಹುದು. ಕಡು ನೀಲಿ, ನೀಲಿ, ಕಡುಕೆಂಪು, ಹಸಿರು ಮತ್ತು ಕಡುಕಪ್ಪು ಬಣ್ಣಗಳ ಬಳೆಗಳನ್ನು ಹೆಚ್ಚಾಗಿ ಚಿತ್ರದುರ್ಗದ ಮೊಳಕಾಲ್ಮೂರಿನಲ್ಲಿ ತಯಾರಿಸುತ್ತಿದ್ದರು. ೨೦ನೇ ಶತಮಾನದ ಆರಂಭದ ವೇಳೆಗೆ ಈ ಕೈಗಾರಿಕೆ ಮೊಳಕಾಲ್ಮೂರಿನಲ್ಲಿ ಸಂಪೂರ್ಣವಾಗಿ ಅವನತಿ ಹೊಂದಿತು.

ಗಾಜಿನ ತಯಾರಿಕೆಯಲ್ಲಿ ಅವಶ್ಯಕವಾದ ಕುಲುಮೆ ಮೊಳಕಾಲ್ಮೂರಿನಲ್ಲಿ ಸ್ಥಾಪಿತವಾಗಿತ್ತು. ಪಟ್ಟಣಕ್ಕೆ ಪೂರ್ವದಲ್ಲಿ ಒಂದು ಮೈಲಿ ದೂರದಲ್ಲಿ ಈ ಕುಲುಮೆ ಇದ್ದಿತು. ಇದರ ಎತ್ತರ ೧೨ ಅಡಿ, ೬ ಅಂಗುಲ, ಸುತ್ತಳತೆ ೧೫ ಅಡಿ, ೧೭೬ ಸಣ್ಣ ಸಣ್ಣ ಮಡಿಕೆಗಳನ್ನು ಇಟ್ಟು ಪ್ರತ್ಯೇಕವಾಗಿ ಈ ಕುಲುಮೆಯಲ್ಲಿ ಗಾಜನ್ನು ತಯಾರಿಸುತ್ತಿದ್ದರು. ಕುಲುಮೆಗೆ ಬೇಕಾದ ಇಂಧನ ಕಾಡಿನ ಮರದಿಂದ ಬರುತ್ತಿತ್ತು. ಕುಲುಮೆಯನ್ನು ಯಾವಾಗಲೂ ಬೆಂಕಿಯಿಂದ ಕಾಯಿಸುವಂತೆ ಏರ್ಪಾಡಾಗಿತ್ತು. ಎಂಟು ದಿವಸಗಳ ಕಾಲ ರಾತ್ರಿ ಹಗಲು ಈ ಕುಲುಮೆಯಲ್ಲಿ ಗಾಜಿನ ಘಟಕಗಳನ್ನು ಹದ ಮಾಡುತ್ತಿದ್ದರು. ಬಣ್ಣದ ಗಾಜುಗಳನ್ನು ತಯಾರಿಸುವಾಗ ಈ ಕುಲುಮೆ ಸತತವಾಗಿ ಹನ್ನೆರಡು ದಿವಸಗಳ ಕಾಲ ಕೆಲಸ ಮಾಡುತ್ತಿತ್ತು. ನಂತರ ಮೂರು ವಾರಗಳ ಕಾಲ ಅದನ್ನು ತಂಪು ಮಾಡುತ್ತಿದ್ದರು. ತಂಪಾದ ಮಡಿಕೆಗಳನ್ನು ಕುಲುಮೆಯ ಬಾಯಿಯಿಂದ ತೆಗೆದು ನಂತರ ಅದನ್ನು ಹರಡುತ್ತಿದ್ದರು. ಗಾಜಿನ ಉತ್ಪಾದನೆಯಲ್ಲಿ ಬಳಸುತ್ತಿದ್ದ ವಸ್ತುಗಳು ಯಾವುವೆಂದರೆ ಮಣ್ಣು, ಸೋಡಾ, ಬೆಣಚುಕಲ್ಲು, ಬಣ್ಣದ ಘಟಕಗಳು, ಕಾಪರ್ ಆಕ್ಸೈಡಂ ಮತ್ತು ಕೋಬಾಲ್ಟ್ ಆಕ್ಸೈಡ್.[೧೮]

**ರಾಜ್ಯದಲ್ಲಿ ಚನ್ನಪಟ್ಟಣದ ಕೈಗಾರಿಕೆಗಳು**

ಚನ್ನಪಟ್ಟಣದ ಗುಡಿಗಾರರು ಕರಕುಶಲ ವಸ್ತುಗಳ ತಯಾರಿಕೆಯಲ್ಲಿ ಪ್ರಖ್ಯಾತರಾಗಿದ್ದರು. ಅರಗಿನ ವಸ್ತುಗಳನ್ನು ಆಟದ ಸಾಮಾನುಗಳನ್ನು ಮತ್ತು ಸಂಗೀತ ವಾದ್ಯಗಳಿಗೆ ಬೇಕಾಗುವ ತಂತಿಗಳನ್ನು ಇಲ್ಲಿ ತಯಾರಿಸುತ್ತಿದ್ದರು. ಮಾಗಡಿಯಲ್ಲಿ ಹಿತ್ತಾಳೆ ದೀಪದ ಕಂಬಗಳು, ಮೊಂಬತ್ತಿ ಸ್ಟ್ಯಾಂಡುಗಳು ಮತ್ತು ಇತರೆ ಗೃಹೋಪಯೋಗಿ ವಸ್ತುಗಳು ತಯಾರಾಗುತ್ತಿದ್ದವು. ಇದಲ್ಲದೆ ಮಾಗಡಿಯಲ್ಲಿ ತಯಾರಾದ ತಂಬೂರಿ ಮತ್ತು ವೀಣೆ ದಕ್ಷಿಣ ಭಾರತದಲ್ಲಿ ಪ್ರಸಿದ್ಧವಾಗಿದ್ದಿತ್ತು.[೧೯]

ಚನ್ನಪಟ್ಟಣದ ಬೊಂಬೆಗಳನ್ನು ತಯಾರಿಸುವ ಪಾರಂಪರಿಕ ಕುಶಲಕರ್ಮಿಗಳು ಚಿತ್ರಕಾರರೆಂಬ ಸಮುದಾಯಕ್ಕೆ ಸೇರಿದವರು ತಾಲ್ಲೂಕಿನಲ್ಲಿ ಇದ್ದಾರೆ. ಈ ಬಣ್ಣದ ಗೊಂಬೆಗಳ ತಯಾರಿಕೆಗೆ ಸುಮಾರು ೨ ಶತಮಾನಗಳಿಗೂ ಹೆಚ್ಚಿನ ಇತಿಹಾಸವಿದೆ. ಈ ಉದ್ಯಮವು ತಾಲ್ಲೂಕಿನ ವಿವಿಧ ಜನಾಂಗದವರ ಜೀವನಾಧಾರವಾಗಿದೆ. ಇಲ್ಲಿ ಸುಮಾರು ೨೦೦೦ಕ್ಕೂ ಅಧಿಕ ಗುಡಿ ಕೈಗಾರಿಕೆಗಳು ಇವೆ. ಹಾಲೆ ಎಂಬ ಒಂದು ಜಾತಿಯ ಕೆತ್ತನೆಯ ಕೆಲಸಕ್ಕೂ ಮೃದುವಾಗಿರುವ ಮರವನ್ನು ಇಲ್ಲಿ ಆಟಿಕೆಗಳ ತಯಾರಿಕೆಗೆ ಉಪಯೋಗಿಸಲಾಗುತ್ತದೆ. ಅತ್ಯಂತ ಸೂಕ್ಷ್ಮ ನವಿರಾದ ಕೆಲಸಗಳನ್ನು ಇಲ್ಲಿ ಕುಶಲಕರ್ಮಿಗಳು ನಿರ್ವಹಿಸುವುದಲ್ಲದೆ ಗುಲಗಂಜಿ ಗಾತ್ರದ ಬೊಂಬೆಗಳಿಂದ ಹಿಡಿದು

---

೧೮. ಮೈಸೂರು ರಾಜ್ಯದಲ್ಲಿ ವಾಣಿಜ್ಯ ಮತ್ತು ಕರಕುಶಲ ಕಲೆಗಳು, ಪು. ೩೦, ೩೧

೧೯. ಅದೇ. ಪು. ೩೪

ದೊಡ್ಡ ಪ್ರಾಣಿ. ಮನುಷ್ಯನ ಗಾತ್ರದವರೆಗೂ ತಯಾರಾಗುತ್ತವೆ. ಮರದ ಸಣ್ಣಸಣ್ಣ ಮಣಿಗಳು ಪೆನ್ನುಗಳು, ಬ್ರೆಷ್ ಕಡ್ಡಿಗಳು, ಬಳೆ, ಉಂಗುರ, ಕೀಬಂಚ್, ದೇವರ ಗೋಪುರ, ಪ್ರಾಣಿ ಪಕ್ಷಿಗಳ ಮಾದರಿಯ, ವಿವಿಧ ಭಂಗಿಯ ವಿಗ್ರಹಗಳು ಹೀಗೆ ವೈವಿಧ್ಯಮಯ ಆಟಿಕೆಗಳು ತಯಾರಾಗುತ್ತವೆ. ಗೃಹ ಅಲಂಕಾರದ ವಸ್ತುಗಳು ಗೃಹೋಪಯೋಗಿ ವಸ್ತುಗಳು ಮರದ ಆಭರಣಗಳು ತಯಾರಾಗುವುದಲ್ಲದೆ, ಇವುಗಳನ್ನು ಅಮೆರಿಕಾ, ಇಂಗ್ಲೆಂಡ್, ಕೆನಡ, ಬ್ರಿಟನ್, ಯುಗೋಸ್ಲಾವಿಯ, ಜಪಾನ್ ಮುಂತಾದ ರಾಷ್ಟ್ರಗಳಿಗೆ ರಫ್ತು ಮಾಡಲಾಗುತ್ತದೆ.

ಚನ್ನಪಟ್ಟಣದಿಂದ ಪ್ರತಿವರ್ಷ ನೂರು ಕೋಟಿಗೂ, ಅಧಿಕ ಬಣ್ಣದ ಬೊಂಬೆಗಳನ್ನು ವಿದೇಶಗಳಿಗೆ ರಫ್ತು ಮಾಡಲಾಗುತ್ತಿದೆ. ಆದರೆ ಇತ್ತೀಚೆಗೆ ಹಾಲೆಮರಗಳು ಕಡಿಮೆಯಾಗಿದ್ದು, ಪ್ಲಾಸ್ಟಿಕ್ ಸಾಮಾಗ್ರಿಗಳು, ಭರಾಟೆಯಿಂದ ನಡೆಯುತ್ತಿದ್ದು, ಈ ಉದ್ಯಮ ಸಂಕಷ್ಟದಲ್ಲಿದೆ. ಬಡವ ಶ್ರೀಮಂತರೆನ್ನದೆ ಜಾತಿ ಧರ್ಮವೆನ್ನದೆ, ಎಲ್ಲರು ತಮ್ಮ ವಯೋಮಾನ ಆಸಕ್ತಿನುಗುಣವಾಗಿ ಇಷ್ಟಪಡುವ ಈ ಬಣ್ಣದ ಬೊಂಬೆಗಳು ಇಂದಿಗೂ ಉಳಿದುಕೊಂಡು ಬರುತ್ತಾ ಇವೆ.

## ಅಧ್ಯಾಯ ೩

# ಚನ್ನಪಟ್ಟಣದ ಚಿತ್ತಾರದ ಗೊಂಬೆಗಳ ಹಿನ್ನೆಲೆ, ಪರಿಕರಗಳು ಮತ್ತು ತಯಾರಿಕೆ

ನಮ್ಮ ಪೂರ್ವಜರ ಮುಖ್ಯ ಕಸುಬು ಕೃಷಿಯೇ ಆಗಿದೆ. ಅಲ್ಲದೆ ಮಳೆ, ಬಿಸಿಲು, ಚಳಿ, ಗಾಳಿಯಿಂದ ರಕ್ಷಣೆ ಪಡೆಯಲು ವಸತಿ ನಿರ್ಮಾಣ ಕಾರ್ಯಗಳು ಆಗಿವೆ. ದೈನಂದಿನ ಬದುಕಿನಲ್ಲಿ ದೈವಿ ಆರಾಧನೆಗೆ ಕೆಲವು ವಿಶಿಷ್ಟ ಆಚರಣೆಗಳು ಕಂಡುಬರುತ್ತದೆ. ಕೆಲವು ಆಟಗಳು ಮನೋರಂಜನೆಗೆ ಪ್ರೇರಕವಾಗಿದ್ದವು. ಹೀಗೆ ಮುಂತಾದವುಗಳನ್ನು ಹುಟ್ಟು ಹಾಕಿಕೊಂಡು ಜೀವನ ನಡೆಸುತ್ತಾ ಬಂದಿದ್ದಾರೆ. ಮನುಷ್ಯನು ತನ್ನ ಜೀವನದಲ್ಲಿ ದಿನನಿತ್ಯದ ಪ್ರತಿಯೊಂದು ಕೆಲಸ ಕಾರ್ಯಗಳಿಗೆ ವಿವಿಧ ರೀತಿಯ ವಸ್ತುಗಳು ಬಳಸಲ್ಪಡುವವು.

ಹಳೆಯ ಮತ್ತು ಹೊಸ ಶಿಲಾಯುಗದಲ್ಲಿ ಮಾನವನು ಅಲೆಮಾರಿ ಅಥವಾ ಬೇಟೆಗಾರಿಕೆಯ ಜೀವನ ನಡೆಸುತ್ತಿದ್ದನು. ಆರಂಭದ ಹಂತದಲ್ಲಿಯೇ ತನ್ನ ಹಸಿವನ್ನು ತಣಿಸಲು ಕೆಲವು ಕಾಡುಪ್ರಾಣಿಗಳನ್ನು ಕೊಲ್ಲುತ್ತಿದ್ದ. ಸತ್ತ ಪ್ರಾಣಿಗಳ ಚರ್ಮದಿಂದ ಕವಚಗಳನ್ನು ತಯಾರಿಸುವುದಕ್ಕೆ ಅಲ್ಲದೇ ಬೆಳೆ ಬೆಳೆಯಲು ಹುಟ್ಟು ಹಾಕಿಕೊಂಡ ಅನೇಕ ಸಲಕರಣೆಗಳು ಮಾನವನ ಸೌಂದರ್ಯ ದೃಷ್ಟಿ ಮತ್ತು ಕಲಾ ಜಾಣ್ಮೆಯನ್ನು ಎತ್ತಿ ತೋರಿಸುತ್ತಿದೆ. ಹೀಗೆ ಬದುಕಿನ ಮುನ್ನಡಿಗೆ ಉಪಯುಕ್ತವಾಗಿರುವ ಸಲಕರಣೆಗಳೇ ಮುಂದೆ ಕರಕುಶಲ ಕಲೆಗಳಿಗೆ ದಾರಿ ಮಾಡಿಕೊಟ್ಟಿವೆ. ಅಂದಿನಿಂದ ಇಂದಿನವರೆಗೂ ಕುಶಲ ಕರ್ಮಿಗಳು ಹಾಗೂ ಅನೇಕ ಕಲಾವಿದರು ವಿವಿಧ

ವಸ್ತುಗಳಲ್ಲಿ ನವೀನ ರೀತಿಯ ವಿನ್ಯಾಸಗಳನ್ನು ಮಾಡಿಸಲು ತಮಗೆ ಬೇಕಾದಂತಹ ಪರಿಕರಗಳನ್ನು ತಯಾರಿಸಿಕೊಳ್ಳುತ್ತಾ ಬಂದಿದ್ದಾರೆ.

ಭಾರತೀಯ ಕರಕುಶಲ ಕಲೆಗಳಿಗೆ ಪುರಾತನ ಪರಂಪರೆಯಿದೆ. ಅದರ ಪರಂಪರೆ ಬಹು ಉಜ್ವಲವಾಗಿದೆ. ಅದು ನಮ್ಮ ಸಂಸ್ಕೃತಿಯ ಮೂರ್ತ ಸ್ವರೂಪವಾಗಿರುವಂತೆ ಕಲಾ ಪರಂಪರೆಯ ಅವಿಭಾಜ್ಯ ಅಂಗವೂ ಆಗಿದೆ. ಹಲವು ಬಗೆಯ ವಿನ್ಯಾಸಗಳಿಂದ ಎತ್ತಲು ಕಲಾತ್ಮಕತೆ ಹೊಸತನಗಳಿಂದ ಭಾರತೀಯ ಕುಶಲ ವಸ್ತುಗಳು ಜಗತ್ತಿನಾದ್ಯಂತ ಪ್ರಖ್ಯಾತಿ ಹೊಂದಿವೆ.

ಭಾರತೀಯ ಸಂಸ್ಕೃತಿಯನ್ನು ಸೌಂದರ್ಯ ಪ್ರಜ್ಞೆಯನ್ನು ಪ್ರತಿನಿಧಿಸುವ ರಾಯಭಾರಿಗಳಿಂತಿರುವ ಕುಶಲ ವಸ್ತುಗಳಿಗೆ ಒಂದು ಕಾಲದಲ್ಲಿ ವಿದೇಶಿ ವ್ಯಾಪಾರ ಮಾರುಕಟ್ಟೆಗಳಲ್ಲಿ ಅಧಿಕ ಬೇಡಿಕೆಯಿತ್ತೆಂದು ಹೇಳುತ್ತಾರೆ. ತುಂಬಾ ನವಿರಾದ ಥಾಕಾಮಸ್ಲಿನ್, ಮನಮೋಹಕ ಕಾಶ್ಮೀರಿ ಶಾಲು, ಅಂದ ಚೆಂದದ ರಾಜಾಸ್ಥಾನದ ಗೊಂಬೆಗಳು. ಚಿತ್ರವಿಚಿತ್ರ ಮೋಹಕ ವಸ್ತುಗಳು, ಪಾತ್ರೆ-ಪಗಡಿಗಳು ಕರ್ನಾಟಕದ ಸುಂದರ ಗಂಧದ ಹಾಗೂ ದಂತಕೆತ್ತನೆ ಮೊದಲಾದವು ಶ್ರೇಷ್ಠ ಗುಣಮಟ್ಟ ಹಾಗೂ ಕಲಾವಿನ್ಯಾಸಗಳಿಗೆ ಹೆಸರು ಮಾಡಿವೆ.

ಈ ಎಲ್ಲಾ ಕುಶಲ ತಯಾರಿಕೆಗಳಿಗೆ ಆಯಾ ಪ್ರದೇಶದ ಸಾಂಪ್ರದಾಯಿಕ ಕಲೆಯ ಹಿನ್ನೆಲೆಯಿದೆ. ತಂತ್ರದ ದೃಷ್ಟಿಯಿಂದ ಇವುಗಳಲ್ಲಿ ಜಟಿಲ ವಿನ್ಯಾಸಗಳು ಇಲ್ಲದಿರಬಹುದು. ಒಟ್ಟಿನಲ್ಲಿ ಅವು ಸರಳ ಕೃತಿಗಳಾದರೂ ಅವುಗಳಲ್ಲಿ ಆಕರ್ಷಕ ಗುಣವಿದೆ. ಮಾನವನ ಪರಂಪರಾಗತಕಲಾ-ಕೌಶಲ್ಯದ ಹೊಳಪು ಕಾಣಿಸುತ್ತದೆ. ಹಾಗೆಯೇ ಪ್ರಾದೇಶಿಕವಾಗಿ ಬೆಳೆದು ಬಂದ ಕಲಾಕುಶಲತೆಯ ಸ್ವರೂಪವನ್ನು ಆಯಾ ವಸ್ತುಗಳು ತೋರಿಸುತ್ತವೆ. ಪ್ರತಿ ತಲೆಮಾರಿನಲ್ಲೂ ಸಂಭವಿಸಿದ ಕಲಾಕುಶಲತೆಯ ಉನ್ನತಿ ಆಯಾ ಕಾಲದಲ್ಲಿ ರಚಿತವಾದ ಕುಶಲವಸ್ತುಗಳನ್ನು ಆಯಾ ಪ್ರಾದೇಶಿಕ ಸ್ಥಳ ವಿನ್ಯಾಸಗಳನ್ನು ಮನಗಾಣಬಹುದು.

ಕುಶಲ ಕೆಲಸದಲ್ಲಿ ವಿನ್ಯಾಸಕ್ಕೆ ಪ್ರಾಮುಖ್ಯವಿದೆ. ಯಾವ ವಸ್ತುಗಳಲ್ಲಿ ಎಂಥ ವಿನ್ಯಾಸಗಳನ್ನು ಮೂಡಿಸಬಹುದು, ಯಾವ ರೀತಿ ಹೆಚ್ಚು ಶೋಭಿಸಿತು, ಯಾವ ಯಾವ ಮೂಲ ವಸ್ತುಗಳನ್ನು ಉಪಯೋಗಿಸಿ ಎಂಥೆಂಥ ವಸ್ತುಗಳನ್ನು ತಯಾರಿಸಬಹುದು ಎನ್ನುವ ಅರಿವು ಕುಶಲಕರ್ಮಿಗೆ ಸದಾ ಇದ್ದೇ ಇರುತ್ತದೆ.

ಗೃಹ ಕೈಗಾರಿಕೆಗಳೆಂದು ಪರಿಗಣಿಸುವ ಕುಶಲ ವಸ್ತುಗಳ ನಿರ್ಮಿತಿಯಲ್ಲಿ ಮನೆಯ ಪ್ರತಿಯೊಬ್ಬ ಸದಸ್ಯನ ಸಹಕಾರ ಇರುತ್ತದೆ. ಕರ್ಮಿ ವಸ್ತುಗಳ ನಿರ್ಮಿತಿಗೆ ಆಯ್ಕೆ ಮಾಡಿಕೊಳ್ಳುವ ವಸ್ತುಗಳಲ್ಲಿ ಉಬ್ಬುಚಿತ್ರಗಳನ್ನು ಮೂಡಿಸಿದರೆ, ಉಳಿದವರು ಅದನ್ನು ನಯಗೊಳಿಸುವುದೋ ಅಥವಾ ಸೂಕ್ಷ್ಮ ಆಯುಧಗಳಿಂದ ಕುಸುರಿ ಬಿಡಿಸುವುದೋ, ಒಪ್ಪುವ ಬಣ್ಣ ಹಾಕುವುದೋ ಹೀಗೆ ಮುಂತಾಗಿ ಸಹಕಾರ ನೀಡುತ್ತಾರೆ. ಈ ಬಗೆಯ ಕಲೆಗಳು ಸಾಮಾನ್ಯವಾಗಿ ದೈಹಿಕ ಪರಿಶ್ರಮದಿಂದ ನಿರ್ಮಾಣವಾಗುತ್ತಿದ್ದರಿಂದ ಪ್ರಜ್ಞಾಪೂರ್ವಕ ಕಲೆ ಎನ್ನುತ್ತಾರೆ.

ಕುಶಲ ಕೆಲಸದಲ್ಲಿ ಸಾಧ್ಯಕ್ಕೂ ಸಾಧನಗಳಿಗೂ ಯಾವಾಗಲೂ ಅಂತರವಿರುತ್ತದೆ. ಗಂಧದ ಮರದಲ್ಲಿ ಕುಸುರಿ ಮಾಡುವ ಗುಡಿಗಾರನಿಗೆ ತನ್ನ ಸಾಧ್ಯದ ಕಲ್ಪನೆಯು ಪೂರ್ಣವಾಗಿರುತ್ತದೆ. ಗರಗಸ, ಅರ, ಉಳಿ, ಉಜ್ಜುಗೊರಡು ಮೊದಲಾದ ಸಾಧನಗಳೆಲ್ಲವೂ ಗಂಧದ ಕುಸುರಿ ನಿರ್ಮಾಣಕ್ಕೆ ಬೇಕಾಗುತ್ತವೆ. ಆದರೆ ಅವನ ನಿರ್ಮಾಣ ಪೂರ್ತಿಯಾದ ಮೇಲೆ ಗುಡಿಗಾರನ ಸಾಧನಗಳು ಬೇರೆಯೇ ಆಗಿ ಉಳಿಯುತ್ತವೆ. ಕಲೆಯ ವಿಷಯಕ್ಕೆ ಬಂದರೆ ಒಬ್ಬ ಕವಿ ತಾನು ಬರೆಯುವ ಮೊದಲು ಎಲ್ಲ ಶಬ್ದ, ವಾಕ್ಯರಚನೆ, ವಸ್ತುವಿನ್ಯಾಸ ಮೊದಲಾದವು ಗಳನ್ನು ಪ್ರಜ್ಞಾಪೂರ್ವಕವಾಗಿ ಸಿದ್ಧವಾಗಿಟ್ಟುಕೊಂಡಿರಲು ಸಾಧ್ಯವಿಲ್ಲ. ಯಾವುದೇ ಸಂದರ್ಭದಲ್ಲಿ ಹಳೆಯ ಒಂದು ಭಾವನೆ ಮನೋವ್ಯಾಪಾರದಲ್ಲಿಯೇ ಹದಗೊಳ್ಳುತ್ತಿರುತ್ತದೆ. ಕೊನೆಯ ಹಂತದಲ್ಲಿ ಭಾವನೆ ಅಭಿವ್ಯಕ್ತಿಗೊಳ್ಳುತ್ತದೆ. ಹಾಗೆ ಅಭಿವ್ಯಕ್ತಗೊಂಡ ಭಾವನೆ ಸುಂದರ ಕವಿತೆಯಾಗಿರಬಹುದು. ಆಗ ಶಬ್ದ ವಾಕ್ಯರಚನೆ ಮುಂತಾದವು ಅವಿಭಾಜ್ಯ ಅಂಗಗಳಾಗಿ ಬಿಡುತ್ತವೆ. ಆದ್ದರಿಂದ ಪ್ರೌಢಕಲೆ ಎನಿಸಿಕೊಳ್ಳುವುದು ಪ್ರಜ್ಞಾಪೂರ್ವಕ ವಾಗಿಯೇ ಮಾಡುವ ಕುಶಲಕಲೆ ಎಂದು ಹೇಳಲು ಆಗುವುದಿಲ್ಲ. ಆ ಕಲೆಯ ಜಾಯಮಾನ ಹುಟ್ಟೇ ಬೇರೆ. ಆದರೆ ಎರಡರ ದೃಷ್ಟಿ ಒಂದೇ ಆಗಲು ಸಾಧ್ಯವಿದೆ. ಒಂದು ಕಾಲದ ದೇಶದ ಸಾಹಿತ್ಯ ಆ ಜನಾಂಗದ ಪರಿಸರದ ಸಂಸ್ಕೃತಿಯನ್ನು ಅಭಿವ್ಯಕ್ತಿಸಿದರೆ ಅದರ ಜೊತೆ ಜೊತೆಗೆ ಗ್ರಾಮಗಳಲ್ಲಿ ಬೆಳೆದು ಬಂದ ಕುಶಲಕಲೆಗಳು ಜನಾಂಗದ ಸಂಸ್ಕೃತಿಯ ಪ್ರತೀಕಗಳಾಗಿ ನಿಲ್ಲುತ್ತವೆ.

ಮರದ ಕೆತ್ತನೆಯೂ ಸಹ ಕರಕುಶಲತೆಯ ಒಂದು ಅತ್ಯಂತ ಪುರಾತನ ಮತ್ತು ವ್ಯಾಪಕ ಅಂಶ. ವಿಶ್ವದ ಎಲ್ಲೆಡೆ ಮರಗಳು ಸಾರ್ವತ್ರಿಕವಾಗಿ ಲಭಿಸಿ ಈ ಉತ್ಪನ್ನ ಸಾಕಷ್ಟು ಕಾಲ ಬಾಳಿಕೆ ಬರುವುದರಿಂದ ಮರಕೆತ್ತನೆ ಎಲ್ಲಾ ಸಂಸ್ಕೃತಿಗಳಲ್ಲಿ ನೂರಾರು ವಿಧಗಳಲ್ಲಿ ಸಾವಿರಾರು ರೂಪಗಳಲ್ಲಿ ಆವಿಷ್ಕಾರಗೊಂಡಿವೆ. ಮರ ಮುಟ್ಟುಗಳು, ನೊಗಗಳು, ಕೊಡಲಿ, ಈಳಿಗೆಮಣೆಯ ಹಿಡಿಕೆಗಳು, ಗಾಡಿಯ ಚಕ್ರಗಳು ಮುಂತಾದ ಅನೇಕಾನೇಕ ದೈನಂದಿನ ಬಳಕೆಯ ವಸ್ತುಗಳಿಂದ ಹಿಡಿದು. ಆಟಿಕೆಗಳು, ಸಂಗೀತ ವಾದ್ಯಗಳು, ಮನೆಗಳು, ಸೂರುಗಳು. ಬಾಗಿಲುಗಳು, ಕಿಟಕಿಗಳು, ಮಂದಾಸನಗಳು, ಕೆತ್ತನೆಯ ಮೂರ್ತಿಗಳು, ಪೀಠೋಪಕರಣಗಳು ಮುಂತಾದ ಅತ್ಯಂತ ಕಲಾತ್ಮಕವಾದ ವಸ್ತುಗಳವರೆಗೆ ಎಲ್ಲವಕ್ಕೂ ತೇಗ, ಶ್ರೀಗಂಧ, ದೇವರಾರು, ಸೀಡರ್, ಓಕ್ ಎಂದು ಪ್ರತಿಯೊಂದು ಮರದ ಗುಣವನ್ನು ಅದರ ವೈಶಿಷ್ಟ್ಯವನ್ನು ಗುರುತಿಸಿ ಈ ನೈಸರ್ಗಿಕ ಸಂಪತ್ತಿನಿಂದ ಕಲೆಗಾರರು ಒಂದು ಅಮೂಲ್ಯ ಕಲೆಯನ್ನು ಸೃಷ್ಟಿಸಿದ್ದಾರೆ. ಈ ಕಲೆ ಪ್ರತಿಯೊಂದು ಖಂಡದಲ್ಲೂ ಪ್ರತಿಯೊಂದು ದೇಶದಲ್ಲೂ ವೈವಿಧ್ಯಮಯವಾಗಿದೆ. ಆಫ್ರಿಕಾ ಖಂಡ ಇದಕ್ಕೊಂದು ಸೊಗಸಾದ ಉದಾಹರಣೆಯಾಗಿದೆ. ಗಿನಿ ಬಿಸ್ಸೋ ಸಿಯರಾ ಲಿಯೋನ್, ನೈಜಿರೀಯ ಮುಂತಾದ ಪ್ರದೇಶಗಳಲ್ಲಿ ಮರದಲ್ಲಿ ಕೆತ್ತಲಾದ ಮುಖವಾಡಗಳನ್ನು ಧರ್ಮಾಚರಣೆಯ ಉದ್ದೇಶಗಳಿಗಾಗಿ ಬಳಸಲಾಗುತ್ತದೆ. ಇವುಗಳನ್ನು ತಪ್ಪಿತಸ್ಥರಿಗೆ ಶಿಕ್ಷೆ ವಿಧಿಸುವುದು, ಭೂ ವಿವಾದಗಳನ್ನು ಬಗೆಹರಿಸುವುದು, ಹೋರಾಟಗಳನ್ನು ಆರಂಭಿಸುವುದು, ಮುಂತಾದ ಪಾಲನೆಗಳ ಸಂಕೇತವಾಗಿ ಪರಿಗಣಿಸಲಾಗುತ್ತದೆ. ಜೈರ್‌ನ ಯಂಕ ಜನಾಂಗಗಳು ರೂಪಿಸುವ ಮರದ ಆಕೃತಿ ಮಾಂತ್ರಿಕ ಶಕ್ತಿಯಿಂದ

ಸಂಪನ್ನವಾಗಿರುತ್ತದೆ ಎಂದು ಭಾವಿಸಿ ಪೂಜಿಸಲಾಗುತ್ತದೆ. ಆಫ್ರಿಕಾದ ಗೊಂಡಾರಣ್ಯಗಳ ಮೂಲ ನಿವಾಸಿಗಳೆಂದು ವರ್ಣಿಸಲಾಗುವ ಪಿಗ್ಮಾಗಳ ಅನೇಕ ರೀತಿಯ ಮುಖವಾಡಗಳು ಮತ್ತು ಪೂಜೆಯ ಕೆತ್ತನೆಗಳಲ್ಲದೆ ವಾಸ್ತವಿಕ ಬಳಕೆಯ ಉಪಕರಣಗಳನ್ನು ಸಹ ಮರದಲ್ಲಿ ಕೆತ್ತುತ್ತಾರೆ. ಆಫ್ರಿಕಾದ ಮರ ಕೆತ್ತನೆಗಳ ಪೈಕಿ ೧೯ನೇ ಶತಮಾನದ ಮೆಂಡೆ ಸ್ತ್ರೀ ಆರಾಧನಾ ವಿಗ್ರಹ, ಮಾನವ ಜನಾಂಗಶಾಸ್ತ್ರಜ್ಞರ ಅಪಾರ ಮೆಚ್ಚುಗೆ ಗಳಿಸಿರುವ ಕೆತ್ತನೆಯಾಗಿದೆ.

ಹಿಂದೂ ಧರ್ಮದ ಪ್ರಭಾವಕ್ಕೆ ಒಳಪಟ್ಟ ಆಗ್ನೇಯ ಏಷ್ಯಾದಲ್ಲಿಯೂ ಮರದ ಮುಖವಾಡಗಳು ಅತ್ಯಂತ ವರ್ಣನೀಯ. ಇವು ಜನರ ಧಾರ್ಮಿಕ ನಂಬಿಕೆಗಳ ಮತ್ತು ಸಂಪ್ರದಾಯಗಳ ಪ್ರತೀಕವಾಗಿವೆ. ಮರದಲ್ಲಿ ಪೀಠೋಪಕರಣಗಳನ್ನು ತಯಾರಿಸುವಲ್ಲಿ ಪ್ರಪ್ರಥಮ ಸಂಸ್ಕೃತಿಯೆಂದರೆ ಈಜಿಪ್ಟ್. ಸುಮಾರು ಕ್ರಿ.ಪೂ. ೩೫೦೦ರಲ್ಲಿ ಮಾಡಲಾದ ಮರದ ಮಂಚ, ನ್ಯೂಯಾರ್ಕಿನ ಮೆಟ್ರೋಪಾಲಿಟನ್ ಮ್ಯೂಸಿಯಂನಲ್ಲಿ ಪ್ರದರ್ಶನಕ್ಕೆ ಇದೆ. ಈಜಿಪ್ಟಿನಲ್ಲಿ ಜನರು ಮೃತಪಟ್ಟಾಗ ಗೋರಿಯಲ್ಲಿ ಹೂಳಲಾಗುವ ಯಾವುದೇ ವ್ಯಕ್ತಿಯ ಆತ್ಮ ಆಗಾಗ್ಗೆ ಮಂಚ, ಸುಪ್ಪತ್ತಿಗೆ ಮುಂತಾದವುಗಳಿಗಾಗಿ ಹಂಬಲಿಸುತ್ತದೆ ಎಂದು ನಂಬುತ್ತಿದ್ದುದರಿಂದ ಗೋರಿಗಳೊಳಗೆ ಆಸನಗಳು, ಮೇಜುಗಳು, ಮಂಚಗಳು ಇತ್ಯಾದಿಯನ್ನು ಜೋಡಿಸಿ ಇಡುತ್ತಿದ್ದರು. ಮೃತಪಟ್ಟ ವ್ಯಕ್ತಿಯ ಸ್ಥಾನಮಾನಕ್ಕೆ ಅನುಗುಣವಾಗಿ ಈ ಮರದ ವಸ್ತುಗಳಲ್ಲಿ ದಂತ ಅಥವಾ ಪ್ರಶಸ್ತ ಹರಳುಗಳು ಅಥವಾ ಚಿನ್ನ ಹುದುಗಿಸಿ ಅಲಂಕೃತಗೊಳಿಸಲಾಗುತ್ತಿತ್ತು. ಎತ್ತರದ ಹಿಂಬದಿಯುಳ್ಳ ಆಸನಗಳು ಸ್ಫಿಂಕ್ಸ್ ಅಥವಾ ಪ್ರಾಣಿ ಸ್ವರೂಪದ ದೇವತೆಯ ಆಕಾರದಲ್ಲಿದ್ದು ಅವುಗಳ ಕಾಲುಗಳು ಸಿಂಹದ ಪಂಜಗಳಾಗಿದ್ದವು.

ಈಜಿಪ್ಟಿನ ಬಡಗಿಗಳ ಈ ಕೌಶಲ್ಯತೆಗೆ ಸರಿ ಸಮಾನವಾದ ಸಾಮರ್ಥ್ಯವನ್ನು ಪಡೆಯಲು ಇತರರಿಗೆ ಹಲವಾರು ಶತಮಾನಗಳು ಬೇಕಾದವು. ಈ ಅಂತರವನ್ನು ಗ್ರೀಸರು ಸ್ವಲ್ಪಮಟ್ಟಿಗೆ ತುಂಬಿ, ಮೆಡಿಟರೇನಿಯನ್ ಆಚೆ ಮತ್ತು ಯೂರೋಪಿನಲ್ಲಿ ಪೀಠೋಪಕರಣಗಳನ್ನು ಪ್ರಚಾರಪಡಿಸಿದರು. ದುಂದು ವೆಚ್ಚದಲ್ಲಿ ನಿಸ್ಸೀಮರಾಗಿದ್ದ ರೋಮನ್ನರು ಅತ್ಯಂತ ಆಡಂಬರದ ಪೀಠೋಕರಣಗಳಿಂದ ತಮ್ಮ ಮನೆಗಳನ್ನು ಸಜ್ಜುಗೊಳಿಸಲು, ಆಫ್ರಿಕಾದಿಂದ ಎಬನಿ ಮರ, ಈಗಿನ ಫ್ರಾನ್ಸ್‌ದಿಂದ ಚದ್ರಿವುಡ್ ಮತ್ತು ಸಿರಿಯಾದಿಂದ ದಂತವರ್ಣದ ಮರಗಳನ್ನು ತರಿಸಿ, ಇಟ್ರುಸ್ಕನ್ ಮತ್ತು  ಗ್ರಾಸ್ ತೊಟ್ಟಾಳುಗಳಿಂದ ಕೆತ್ತಿಸಿ, ಇವುಗಳನ್ನು ಚಿನ್ನ, ದಂತ ಮತ್ತು ಅರೆ ಪ್ರಶಸ್ತ ಹರಳುಗಳ ಬಳಕೆಯ ಮೂಲಕ ಇನ್ನೂ ಭವ್ಯಗೊಳಿಸುತ್ತಿದ್ದರು. ೪ನೆಯ ಶತಮಾನದಲ್ಲಿ ರೋಮನ್ನರ ವೈಭವ ಜೀವನ ಅಂತ್ಯ ಗೊಂಡಾಗ, ಬೈಜಾಂಟಿನ್ ಮರಗೆಲಸದ ಪ್ರಮುಖ ಕೇಂದ್ರವಾಗಿ ಪ್ರಾಬಲ್ಯ ಪಡೆಯಿತು. ಇಲ್ಲಿಯೂ ಸಹ ಎತ್ತರದ ಹಿಂಬದಿಯುಳ್ಳ ಸಿಂಹಾಸನ ರೀತಿಯ ಕುರ್ಚಿಗಳನ್ನು ಚರ್ಚ್‌ಗಳಲ್ಲಿನ ಪ್ರಮುಖರಿಗಾಗಿ ಮತ್ತು ಬೃಹತ್ ಕ್ಯಾಥೀಡ್ರಲ್‌ಗಾಗಿ ಬಳಸಲಾಗುತ್ತಿತ್ತು. ಇಟಲಿಯ ರೆಪಿನ್ನಾದಲ್ಲಿ ಈ ರೀತಿಯ ಒಂದು ಕುರ್ಚಿಯನ್ನು ಕಾಣಬಹುದು. ರೋಮ್ ನಗರದ ಸೇಂಟ್ ಪೀಟರಂ ಚರ್ಚ್‌ನಲ್ಲಿರುವ ಮತ್ತೊಂದು ಬೈಜಾಂಟಿನ್ ಕುರ್ಚಿಯನ್ನು ಸೇಂಟಂ ಪೀಟರ್, ರೋಮ್‌ನ ಬಿಷಪ್ ಆಗಿದ್ದಾಗ ಉಪಯೋಗಿಸುತ್ತಿದ್ದರೆಂದು ಹೇಳಲಾಗಿದೆ.

ವರ್ಷಗಳು ಕಳೆದು ಮಧ್ಯಯುಗ ಪುನರುತ್ಥಾನಕ್ಕೆ ಕಾಲಿಟ್ಟಾಗ, ಕ್ಯಾಥೀಡ್ರಲ್‌ಗಳು ಮತ್ತು ಕ್ರೈಸ್ತ ಮಠಗಳು ಗತಕಾಲಕ್ಕೆ ತಳ್ಳಲ್ಪಟ್ಟವು. ಕುಲೀನರಿಗೆ ಧರ್ಮರಕ್ಷಣೆ, ಯುದ್ಧ ಎಂಬುದು ಅಪ್ರಿಯ ವಿಷಯಗಳಾಗಿ, ಕಲೋಪಾಸನೆಯೇ ಅವರುಗಳಿಗೆ ಬಾಳಿನ ಗುರಿಯಾಯಿತು. ಇಟಲಿಯಿಂದ ಆರಂಭವಾಗಿ, ಪಾಶ್ಚಿಮಾತ್ಯ ಜಗತ್ತಿನಲ್ಲಿ ಬಹು ಬೇಗನೆ, ಹರಡಿದ ಈ ಉನ್ಮಾದ, ಇತರವುಗಳೊಂದಿಗೆ ಪೀಠೋಪಕರಣಗಳ ವಿನ್ಯಾಸದಲ್ಲೂ ಒಂದು ವಿನೂತನತೆ ಮೂಡಿತು. ಗ್ರೀಸರು ಮತ್ತು ರೋಮನ್ನರು ಶೈಲಿಗಳನ್ನು ಧಾರಳವಾಗಿ ಬಳಸಿಕೊಂಡ ಈ ಪೀಠೋಪಕರಣಗಳು, ಅರಮನೆಗಳು ಮತ್ತು ಶ್ರೀಮಂತರ ಮನೆಗಳ ಮೂಲೆ ವರ್ಸೆಯ್‌ದಲ್ಲಿರುವ ಹದಿನಾಲ್ಕನೆಯ ಲೂಯಿಯ ಅರಮನೆ ಭವ್ಯತೆಯನ್ನು ಸಾರುತ್ತದೆ. ಎಪ್ಪತ್ತೆರಡು ವರ್ಷಗಳ ತನ್ನ ಸುದೀರ್ಘ ಆಡಳಿತದ ಸಮಯದಲ್ಲಿ ಈ ದೊರೆ ಮರದ ಕೆತ್ತನೆಯನ್ನು ಪೋಷಿಸಿ ರೂಪಿಸಿರುವ ನಮೂನೆಗಳನ್ನು ವಿವರಿಸುವ ಒಂದು ಕಠಿಣ ಕೆಲಸವಾಗಿದೆ.

ಭಾರತದಲ್ಲಿ ಮರಕೆತ್ತನೆಯು ಒಂದು ಉತ್ತಮವಾದ ಸಂಪ್ರದಾಯವಾಗಿದೆ. ಮರದಲ್ಲಿ ಕೈಗೊಳ್ಳಲಾಗುವ ಸೂಕ್ಷ್ಮ ಕೆತ್ತನೆಗಳು ದೇವಾಲಯ, ಮನೆಗಳಲ್ಲಿ, ಮಠಗಳಲ್ಲಿ, ಮಂಟಪಗಳಾಗಿ ರಥಗಳಾಗಿ, ಕಾಷ್ಠಶಿಲ್ಪಗಳಾಗಿ ಸಾಕಾರಗೊಂಡಿರುವ ಸಮಯದಲ್ಲಿ ಅರಮನೆಗಳಲ್ಲಿ ಅತ್ಯಾಕರ್ಷಕ ದ್ವಾರಗಳಾಗಿ, ಸುಂದರ ವಿನ್ಯಾಸದ ಕಂಬಗಳಾಗಿವೆ. ಹಿಮಾಚಲ ಪ್ರದೇಶದಲ್ಲಿನ ಸುಮಾರು ೧೦೦೦ ವರ್ಷಗಳಷ್ಟು ಪುರಾತನವಾದ ಹಿಡಂಬೆ ದೇವಾಲಯವು ಚಳಿ, ಗಾಳಿ, ಹಿಮಕ್ಕೆ ಮೈಯೊಡ್ಡಿದ್ದರೂ ಸ್ವಲ್ಪವೂ ಹಾನಿಯಾಗದಂತೆ ಉಳಿದಿರುವುದು, ಮರದ ಸಂರಕ್ಷಣೆಗಾಗಿ ಮಾರ್ಗದರ್ಶನ ಹಾಕಿಕೊಟ್ಟಂತಾಗಿದೆ. ಗುಡ್ಡಗಾಡು ಜನಾಂಗಗಳು ಈಗಲೂ ಅಸ್ತಿತ್ವದಲ್ಲಿರುವ ಮಧ್ಯಪ್ರದೇಶದ ಬಸ್ತರ್ ಮುಂತಾದ ಸ್ಥಳಗಳು ಮರದ ಕೆತ್ತನೆಯ ಧಾರ್ಮಿಕ ನಂಬಿಕೆಗಳಿಗೆ ಇಂಬು ನೀಡಿವೆ.

ಆಧುನಿಕತೆಯನ್ನು ಪಡೆದಿದ್ದರೂ ತನ್ನ ಆಕರ್ಷಣೆಯನ್ನು ಕಳೆದುಕೊಳ್ಳುವಂತೆ ಕರಕುಶಲತೆ ಮರದ ಕೆತ್ತನೆಯುಲ್ಲಿ ಸಜೀವವಾಗಿದೆ. ನಿಸರ್ಗಜನ್ಯ ಹಾಗೂ ಸಹಜವಾಗಿ ದೊರಕಿದ ಇನ್ನೊಂದು ಕರಕುಶಲ ಕಲೆಯ ಮೂಲ ಸಾಮಗ್ರಿ ಮರ ಅಥವಾ ಕಟ್ಟಿಗೆಯಾಗಿದೆ. ಈ ಸಾಮಗ್ರಿಯನ್ನು ಬಳಸಿಕೊಂಡು ಮಾಡುತ್ತಾ ಬಂದ ಕರಕುಶಲ ಕಲೆಗಾರಿಕೆಯನ್ನು 'ಕಾಷ್ಠಶಿಲ್ಪ' ಎನ್ನುತ್ತಾರೆ.

ಪ್ರಾಗೈತಿಹಾಸ ಕಾಲದಿಂದಲೂ ಕಟ್ಟಿಗೆ ವಸ್ತು ಸಾಧನ ಸಾಮಗ್ರಿಗಳನ್ನು ಬಳಸಿಕೊಂಡಿರಬಹುದಾದರೂ ಇದು ಹೆಚ್ಚು ಕಾಲ ಬಾಳಿಕೆ ಬಾರದ ಸಾಮಗ್ರಿಯಾದುದ್ದರಿಂದ ಪಳೆಯುಳಿಕೆಗಳು ದೊರಕಿಲ್ಲ. ಆದರೆ ಕಟ್ಟಿಗೆ ಅಥವಾ ಮರದ ಕೆತ್ತನೆಯ ಕಲೆಗಾರಿಕೆ ತುಂಬಾ ಪ್ರಾಚೀನವಾದುದ್ದಾಗಿದೆ. ಈ ಸಾಮಗ್ರಿಯನ್ನು ಬಳಸಿಕೊಂಡು ವಿವಿಧ ವಸ್ತುಗಳನ್ನು ರಚಿಸುವ ಕುಶಲತೆಯನ್ನು ಬಡಿಗ, ಬಡಿಗಾರ, ಕಾಷ್ಠಶಿಲ್ಪ ಅಥವಾ ಸೂತ್ರಧಾರ ಎಂದು ಗುರುತಿಸಬಹುದು.

ಪ್ರಾಚೀನ ಕಾಲದಿಂದಲೂ ನಿತ್ಯ ಜೀವನದ ಹಲವಾರು ಅವಶ್ಯಕತೆಗಳನ್ನು ಪೂರೈಸುತ್ತಾ ಬಂದ ಪ್ರಯೋಜಕ

ಕಲೆಯಾಗಿದೆ. ಇಂಥ ಪ್ರಾಚೀನ ಕುಶಲ ಪರಂಪರೆಯನ್ನು ಉಳಿಸಿ ಬೆಳಸಿಕೊಂಡು ಬಂದ ಅನೇಕ ಪಟ್ಟಣ, ಊರುಗಳನ್ನು ಭಾರತದಾದ್ಯಂತ ಇಂದಿಗೂ ಕಾಣಬಹುದು. ಪ್ರಮುಖವಾದ ಕೆಲವನ್ನಿಲ್ಲಿ ಉಲ್ಲೇಖಿಸಬಹುದಾಗಿದೆ. ಲಖನೌ, ಕಾಶ್ಮೀರ, ಗುಜರಾತ್, ಸೌರಾಷ್ಟ್ರ ಹಾಗೂ ನಾಸಿಕ್‌ಗಳಲ್ಲಿ ಕಟ್ಟಿಗೆಯಿಂದ ತಯಾರಿಸಲಾದ ಬಾಲಿ, ಪಿಂಜರಾ(ಕಿಡಕಿ)ಗಳು, ತೊಲೆ, ಬೋಧಿಗೆ, ಕಿಡಕಿಗಳು ತುಂಬಾ ಪ್ರಖ್ಯಾತವಾಗಿವೆ. ಹಾಗೆಯೇ ಪಂಜಾಬ್, ಉತ್ತರ ಪ್ರದೇಶ, ಆಳಿಘರ, ಅಜಮ ಘರ, ಬರೇಲಿ, ಮಥುರಾ, ಬುಲಂದ ಶಹರ, ಗಾಜಿಪುರ, ಮುಂತಾದೆಡೆಗಳಲ್ಲಿ ಪೀಠೋಪಕರಣಗಳ ಅಲಂಕಾರಿಕ ಕೆತ್ತನೆಗಳು ವಿಖ್ಯಾತವಾಗಿವೆ. ಅದರಂತೆ ಕೊಡಗು, ಮೈಸೂರು, ಸಾಗರ, ಕುಮಟಾ. ಶಿವಮೊಗ್ಗ, ಉತ್ತರ ಕನ್ನಡ, ಟ್ರಾವಂಕೂರು, ತಿರುಚಿನಾಪಳ್ಳಿ ಮುಂತಾದಡೆಗಳಲ್ಲಿ ಶ್ರೀಗಂಧ ಕಟ್ಟಿಗೆಯ ತಯಾರಿಕೆಗಳು ಲೋಕವಿನ್ಯಾಸವಾದವುಗಳು.

ಹೀಗೆ ವ್ಯಾಪಕವಾಗಿಯೂ ವಿಪುಲವಾಗಿಯೂ ದೊರಕುವ ಮರ ಅಥವಾ ಕಾಷ್ಟದ ಉಪಲಬ್ಧಯು ಆಯಾ ಭಾಗದ ಕುಶಲಿಗಳ ಪರಿಣತಿಯನ್ನಾಧರಿಸಿದೆ. ಈ ಕಲೆಯು ವಿಕಾಸಗೊಳ್ಳುತ್ತಾ ಬಂದಿದೆ. ಇದು ಅಸ್ಸಾಂ, ಬಂಗಾಲ, ಒರಿಸ್ಸಾ, ಕಾಶ್ಮೀರ, ಗುಜರಾತ್, ಉತ್ತರ ಪ್ರದೇಶ, ದೆಹಲಿ, ಸೂರತ್ ಮತ್ತು ದಕ್ಷಿಣ ಭಾರತದ ಕರ್ನಾಟಕ, ಕೇರಳ, ಆಂಧ್ರ ಹಾಗೂ ತಮಿಳುನಾಡು ಮುಂತಾದೆಡೆಗಳಲ್ಲಿ ಪ್ರಾದೇಶಿಕ ವೈವಿಧ್ಯತೆಗಳೊಂದಿಗೆ ಬೆಳೆದು ಬಂದಿದೆ. ಅನೇಕ ಮುಖವಾಗಿ ಅಭಿವೃದ್ಧಿ ಹೊಂದಿದೆ.

ಹಗುರವಾದ ಕಟ್ಟಿಗೆಯನ್ನು ಬಳಸಿಕೊಂಡು ಮಾಡಿದ ಪ್ರಾಣಿ-ಪಕ್ಷಿ, ಹಣ್ಣು-ಹಂಪಲುಗಳು, ಆಸನ, ಅಲಂಕಾರ ಫಲಕಗಳು ಈ ಕಲೆಯ ಇನ್ನೊಂದು ಮುಖವನ್ನು ಪರಿಚಯಿಸುತ್ತವೆ. ಇಂಥ ಕಟ್ಟಿಗೆಯ ವಸ್ತುಗಳ ಮೇಲೆ ದೇಶೀವರ್ಣಗಳನ್ನು ಉಜ್ಜಿ ಬಳಸಿ ಅದರ ಮೇಲೆ ವಾರ್ನಿಶ್ ಲೇಪವನ್ನಾಗಲಿ ಅರಗು ಲೇಪನವನ್ನಾಗಲಿ ಮಾಡಿ ಸಿದ್ದಪಡಿಸಿದ ಕರಕುಶಲ ವಸ್ತುಗಳು ಕಲೆಯ ವೈವಿಧ್ಯ ವಿಸ್ತರಣೆಗಳೇ ಆಗಿವೆ ಎನ್ನಬಹುದು.

ಇದು ಭಾರತದ ಪ್ರತಿ ಹಳ್ಳಿ ಹಾಗೂ ಪಟ್ಟಣಗಳಲ್ಲಿ ಆಯಾ ಪರಿಮಿತಿಯನ್ನು ಪಡೆದುಕೊಂಡಿದೆ. ನಿತ್ಯ ಬಳಕೆಯ ಪೆಟ್ಟಿಗೆ ತೊಟ್ಟಿಲು ಮುಂತಾದ ಗೃಹೋಪಯೋಗಿ ವಸ್ತುಗಳು, ಅಲಂಕಾರಿಕ ಪೀಠೋಪಕರಣಗಳು, ಬಾಗಿಲು ಚೌಕಟ್ಟುಗಳು, ಆರಾಧನೆಯ ಹಾಗೂ ಅಲಂಕಾರಿಕ ಮೂರ್ತಿಶಿಲ್ಪಗಳು, ಆಟಿಕೆ ಸಾಮಾನು, ಅಲಂಕಾರ ವಸ್ತುಗಳು ಹೀಗೆ ನೂರಾರು ಕರಕುಶಲ ವಸ್ತುಗಳ ತಯಾರಿಕೆಯನ್ನು ಒಳಗೊಂಡು ವ್ಯಾಪಕವಾಗಿ ವಿಕಾಸಗೊಳ್ಳುತ್ತಾ ಬಂದಿದೆ.

ಕುಂಬಾರಿಕೆ, ಶಿಲ್ಪಗಾರಿಕೆ, ಬಡಿಗೆಗಾರಿಕೆ, ವಸ್ತ್ರಗಾರಿಕೆ ಹಾಗೂ ಕಮ್ಮಾರಿಕೆ, ಈ ಕುಶಲತೆಗಳೇ ಕಾಲಾಂತರದಲ್ಲಿ ನೂರಾರು ಕುಶಲಕಲೆಗಳಾಗಿ ಬೆಳೆದು ಬಂದಿದೆ. ಇಂದು ಸ್ವತಂತ್ರ ಕರಕುಶಲಕಲೆಗಳಾಗಿ ಅಭಿವೃದ್ಧಿಗೊಂಡಿರುವುದನ್ನು ಕಾಣಬಹುದು. ಒಂದೆಡೆ ಇದಕ್ಕೆ ಬೆಳೆಯುತ್ತಿರುವ ಕರಕುಶಲಗಳ ಸಂಖ್ಯೆ ಕಾರಣವಾದರೆ, ಇನ್ನೊಂದೆಡೆ ಅರಸರ ಆಶ್ರಯ ಪ್ರೋತ್ಸಾಹ ಹಾಗೂ ಜನಸಮುದಾಯದ ಬೇಡಿಕೆ ಅಭಿರುಚಿಗಳು ಕಾರಣವಾಗಿದೆ. ಉದಾಹರಣೆಗೆ ಶಿಲ್ಪಿಗಳ ಸಂಖ್ಯೆ ಹೆಚ್ಚಾದಾಗ ಅವರಲ್ಲಿಯೇ ಕೆಲವರು ಶಿಲಾ ಕೆತ್ತನೆ, ಕೆಲಸ

ಮಾತಲು ಮುಂದಾಗಿರಬೇಕು. ಕಾಲಾಂತರದಲ್ಲಿ ಅವೇ ಸ್ವತಂತ್ರ ಕುಶಲಕಲೆಗಳಾಗಿ ಬೆಳೆದು ಬಂದಿರಬಹುದಾಗಿದೆ. ಹೀಗೆ ಅನೇಕ ಕರಕುಶಲಕಲೆಗೆ ದಾರಿ ಮಾಡಿಕೊಟ್ಟಿರಬಹುದಾಗಿದೆ.

ಆಟಿಕೆ ಮುಂತಾದ ಶಿಲ್ಪಕಲೆಗಳಿಗೆ ಆಸ್ಪದ ಮಾಡಿಕೊಟ್ಟಿರಬೇಕು. ಹೊಳಪುಳ್ಳ ಹೊಳಪಿಲ್ಲದ ಅನೇಕ ಬಗೆಯ ನಿತ್ಯೋಪಯೋಗಿ, ತಟ್ಟೆ, ಬಟ್ಟೆಗಳು ಕಪ್ಪು, ಸಾಸರ್, ಆಟಿಕೆಗಳು, ಹೂದಾನಿ, ಕುಂಡಲಿ, ಪೂಜೆ, ಪ್ರಾಣಿ-ಪಕ್ಷಿ ಮಾನವ ಆಕೃತಿ ಮುಂತಾದ ಅಲಂಕಾರಿಕ ಕರಕುಶಲ ವಸ್ತು ನಿರ್ಮಾಣಗಳು ವಿಸ್ತರಣೆಗೊಂಡಿದೆ.

ಕರಕುಶಲ ಕಲೆಗಳು ಇಂದಿಗೂ ಪ್ರಖ್ಯಾತಿಯನ್ನು ಪಡೆದಿವೆ. ಇಂಥ ಕರಕುಶಲಕಲೆಗಳನ್ನು ಪೋಷಿಸಿಕೊಂಡು ಬಂದ ಪ್ರಮುಖ ಸ್ಥಳಗಳೆಂದರೆ ಆಗ್ರಾ, ಅಹಮದಾಬಾದ್, ಅಮೃತಸರ, ಬನಾರಸ್, ಬೆಂಗಳೂರು, ಮುಂಬಾಯಿ, ಕಲಕತ್ತಾ, ದಾರ್ಜಿಲಿಂಗ್, ದೆಹಲಿ, ಹೈದರಾಬಾದ್, ಜೈಪುರ, ಕಾಶ್ಮೀರ, ಲಖನೌ, ಮದ್ರಾಸ್, ಮುರ್ಶಿದಾಬಾದ್, ಮೈಸೂರು, ತಂಜಾವೂರು, ತಿರುಚಿನಾಪಳ್ಳಿ ಮುಂತಾದ ಪ್ರಮುಖ ನಗರಗಳು ಹಾಗೂ ಇವುಗಳ ಸುತ್ತಮುತ್ತಲಿನ ಹಳ್ಳಿಗಾಡು ಪ್ರದೇಶಗಳಾಗಿವೆ. ಕರಕುಶಲ ಕಲಾವಿದರು ಪ್ರಾಚೀನ ಕಾಲದಿಂದಲೂ ದೇಶದ ಶ್ರೀಮಂತವಾದ ಕರಕುಶಲ ಕಲಾಪರಂಪರೆಯನ್ನು ಶತಮಾನಗಳ ಉದ್ದಕ್ಕೂ ಉಳಿಸಿಕೊಂಡು ಬರಲು, ಅಭಿವೃದ್ಧಿ ಪಡಿಸಲು ಹೆಣಗಾಡುತ್ತಲೇ ಬಂದಿದ್ದಾರೆ. ಈ ಕಾರ್ಯವನ್ನು ಹಿಂದೆ, ವೃತ್ತಿ ಸಂಘ ಶ್ರೇಣಿಗಳನ್ನು ಹುಟ್ಟು ಹಾಕಿಕೊಳ್ಳುವ ಮೂಲಕ, ಈಚೆಗೆ ಆಂದೋಲನ ಚಳುವಳಿಗಳ ಮೂಲಕ ಕೈಗೊಳ್ಳುತ್ತಾ ಬಂದಿರುವುದು ಕರಕುಶಲ ಕಲೆಗಳ ವಿಕಾಸದ ಚರಿತ್ರೆಯಲ್ಲಿ ತುಂಬಾ ಮಹತ್ವದ ಘಟನೆಗಳಾಗಿವೆ ಎನ್ನಬಹುದು.

ಹಿಂದೆ ಮತ್ತು ಇಂದು ನಿತ್ಯೋಪಯೋಗಿ ಕರಕುಶಲ ವಸ್ತುಗಳ ಉತ್ಪಾದನೆಯು ದೇಶದಾದ್ಯಂತವೂ ಕಂಡುಬರುತ್ತದೆ. ಆದರೆ ಅಲಂಕಾರ ಮೂಲವೆನ್ನಲಾಗುವ ಕುಶಲಕಲೆಗಳು ಮಾತ್ರ ದೇಶದ ಎಲ್ಲೆಡೆಗಳಲ್ಲಿಯೂ ವಿಕಾಸಗೊಳ್ಳಲಿಲ್ಲ. ಇದಕ್ಕೆ ಒಂದೆಡೆ, ಆಯಾ ಭಾಗದ ಕುಶಲಕಲೆಗಳು ಪಡೆಯುತ್ತಾ ಬಂದ ಆಶ್ರಯ ಪ್ರೋತ್ಸಾಹಗಳು ಕಾರಣವಾಗಿದ್ದರೆ, ಇನ್ನೊಂದೆಡೆ ಕರಕುಶಲ ವಸ್ತುಗಳ ತಯಾರಿಕೆಯಲ್ಲಿ ಬಳಸಿಕೊಳ್ಳುವ ಮೂಲ ಸಾಮಾಗ್ರಿಗಳ ಲಭ್ಯತೆಗಳು ಕಾರಣವಾಗಿವೆ.

ಸದ್ಯ ಪ್ರಚಾರವಾಗಿರುವ ಎಲ್ಲಾ ಕರಕುಶಲ ಕಲೆಗಳು ಒಂದೇ ಕಾಲಕ್ಕೆ ಹುಟ್ಟಿಕೊಂಡಿರಲಾರವು. ಹಾಗೆಯೇ ಏಕಕಾಲಕ್ಕೆ ಎಲ್ಲಾ ಕರಕುಶಲ ಕಲೆಗಳ ಅಭಿವೃದ್ಧಿಯೂ ಆಗಿರಲಾರದು. ಏಕೆಂದರೆ ಕರಕುಶಲಕಲೆಗಳು ನಿತ್ಯ ಜೀವನದ ಅಗತ್ಯ ಅಭಿರುಚಿಗಳಿಗೆ ಅನುಗುಣವಾಗಿ ಹುಟ್ಟಿಕೊಳ್ಳುತ್ತಲೆ ಜೀವನದ ಅಗತ್ಯ ಅಭಿರುಚಿಗಳಿಗೆ ಅನುಗುಣವಾಗಿ ಹುಟ್ಟಿಕೊಳ್ಳುತ್ತಲೇ ವಿಕಾಸಗೊಳ್ಳುತ್ತವೆ. ಕೆಲವು ಸಂದರ್ಭಗಳಲ್ಲಿ ಅರಸರು, ಅಧಿಕಾರಿಗಳು, ಆಸಕ್ತಿವಹಿಸಿ ಅವುಗಳ ಅಭಿವೃದ್ಧಿಗೆ ಕಾರಣವಾದದ್ದು ಕಂಡುಬರುತ್ತದೆ. ಅಂದರೆ ಕರಕುಶಲ ಕಲೆಗಳ ಅಭಿವೃದ್ಧಿ ವಿಕಾಸಗಳು ಮೂಲ ಸಾಮಗ್ರಿಗಳ ಉಪಲಬ್ಧ ಹಾಗೂ ಆಯಾ ಕಾಲದ ಜನತೆಯ ಅಭಿರುಚಿ ಅಭಿಲಾಷೆಗಳನ್ನು ಅವಲಂಬಿಸಿರುತ್ತವೆ ಎನ್ನಬಹುದು.

ಕುಶಲಕಲೆಗಳು ಅಭಿವೃದ್ಧಿಯನ್ನು ಹೊಂದುತ್ತಿರುವಾಗ ಹೆಚ್ಚು ಸಂಖ್ಯೆಯ ಕುಶಲಿಗರು ಅವುಗಳ ಉತ್ಪಾದನೆಯಲ್ಲಿ ತೊಡಗಿಸಿಕೊಳ್ಳುವುದು ಸಹಜವಾಗಿದೆ. ಆಗ ಕುಶಲಗಳಿಗೆ ಪ್ರತ್ಯೇಕವಾದ ಕಾರ್ಯಾನುಕೂಲ ವಾತಾವರಣ, ಕಾರ್ಯಾಗಾರ ಹಾಗೂ ವಸತಿಗಳ ಏರ್ಪಾಡು ಆಗಬೇಕಾಗುತ್ತದೆ. ಪ್ರಾಚೀನ ಕಾಲದಲ್ಲಿ ಇಂಥ ವ್ಯವಸ್ಥೆ ಇದ್ದುದು ತಿಳಿದುಬರುತ್ತದೆ. ಅಂದು ಕುಶಲಿಗಳ ವಸತಿಗಾಗಿ ನಗರದ ಒಂದು ಭಾಗವನ್ನೊ ಅಥವಾ ಸಣ್ಣ ಗ್ರಾಮವನ್ನೋ ಬಿಟ್ಟು ಕೊಡುತ್ತಿದ್ದುದು ಸಾಮಾನ್ಯ ಸಂಗತಿಯಾಗಿದೆ. ಅಂಥವುಗಳಲ್ಲಿ ನೂರಾರು ಕುಶಲಿಗರು ಒತ್ತೊಟ್ಟಿಗೆ ಇದ್ದು ಜನ ಸಮುದಾಯದ ಅಗತ್ಯಗಳನ್ನು ಪೂರೈಸುತ್ತಾ ಬಂದುದು ಕಂಡುಬರುತ್ತದೆ.

ಇಂಥ ಸಂದರ್ಭಗಳು ಕರಕುಶಲಿಗಳ ಆರ್ಥಿಕ ಪರಿಸ್ಥಿತಿಯ ಸುಧಾರಣೆ ಹಾಗೂ ರಾಜಕೀಯ ಸಾಮಾಜಿಕ ಗೌರವಕ್ಕೆ ಕಾರಣವಾಗಿರಬೇಕು. ಇದಕ್ಕಾಗಿ ಕುಶಲಿಗರು, ಕೆಲಸ ಮಾಡಿದುದನ್ನು ಚರಿತ್ರೆಯಲ್ಲಿ ಕಾಣಬಹುದು. ತಲೆಮಾರುಗಳಿಂದ ಅಭಿವೃದ್ಧಿ ಪಡಿಸಿಕೊಂಡು ಬಂದ ತಮ್ಮ ಕಲಾ ಪರಂಪರೆಯ ರಕ್ಷಣೆಗಾಗಿ ಹಾಗೂ ಅದರ ಮುಂದುವರಿಕೆಗಾಗಿ ಕುಶಲಿಗರು ಸಂಘಟಿಕರಾಗಿದ್ದಾರೆ. ಇಂಥ ಸಂಘಟನೆಗಳನ್ನು ವೃತ್ತಿ ಸಂಘ ಅಥವಾ ಶ್ರೇಣಿ ಎನ್ನುತ್ತಾರೆ.

ಕರಕುಶಲಿಗಳ ಶ್ರೇಣಿಗಳು ವೃತ್ತಿ ನಿಯಮಗಳನ್ನು ರೂಪಿಸುವ, ಅವುಗಳನ್ನು ಜಾರಿಯಲ್ಲಿ ತರುವ, ಶ್ರೇಣಿಯ ಸದಸ್ಯರಿಗೆ ನ್ಯಾಯ ಒದಗಿಸಿಕೊಡುವ ಶಾಸಕಾಂಗ, ಕಾರ್ಯಾಂಗ ಮತ್ತು ನ್ಯಾಯಾಂಗಗಳ ಕೆಲಸ ಮಾಡುತ್ತಲಿದ್ದುದು ಗೊತ್ತಾಗುತ್ತದೆ. ಕುಶಲಗಳು ಶ್ರೇಣಿಗಳು ಸ್ವಾಯುತ್ತ ಸಂಸ್ಥೆಗಳಾದವು. ಶ್ರೇಣಿಯ ಪ್ರಮುಖರು ರಾಜ್ಯದ ವ್ಯವಹಾರಗಳಲ್ಲಿ ಕ್ರಿಯಾಶೀಲರಾಗಿ ಭಾಗಿಯಾಗುತ್ತಿದ್ದರು. ಕೆಲವು ಸಂದರ್ಭಗಳಲ್ಲಿ ಅರಸನ ಸಲಹೆಗಾರನಾಗುವಷ್ಟು ಪ್ರಭಾವಶಾಲಿಯಾಗಿರುತ್ತಿದ್ದರು. ಒಂದು ಕಾಲಕ್ಕೆ ಕರಕುಶಲಿಗಳ ಶ್ರೇಣಿಗಳು ಇಂದಿನ ಬ್ಯಾಂಕುಗಳಂತೆ, ಕೆಲಸ ಮಾಡುತ್ತಿದ್ದು ದೇಶದ ಸಮಾಜೋ-ಆರ್ಥಿಕ ಜೀವನದಲ್ಲಿ ತುಂಬಾ ಮಹತ್ವದ ಪಾತ್ರವನ್ನು ವಹಿಸಿವೆ.

ವೇದ ಕಾಲದಿಂದಲೂ ಕರಕುಶಲಿಗರ ಸಂಘ ಅಥವಾ ಶ್ರೇಣಿಗಳು ಎದುರಿಸಬೇಕಾದ ಸಮಸ್ಯೆಗಳನ್ನು ಪರಿಶೀಲಿಸಿ ರಾಜ್ಯ ಹಾಗೂ ಕೇಂದ್ರ ಸರಕಾರಗಳಿಗೆ ಸಂಪೂರ್ಣವಾದ ಮಾಹಿತಿ ಹಾಗೂ ತಿಳುವಳಿಕೆಯನ್ನು ಕೊಡಲಾಯಿತು. ತಕ್ಷಣವೇ ಕರಕುಶಲ ಮಂಡಳಿಗಳನ್ನು ಸ್ಥಾಪಿಸಿ ಅಳಿದು ಹೋಗುತ್ತಿದ್ದ ಕರಕುಶಲ ಕಲೆಗಳನ್ನು ಕುಶಲಿಗಳನ್ನು ಸುಚೇತನಗೊಳಿಸಲಾಯಿತು. ಇಂಥ ಕಲಾಪರಂಪರೆಯ ಬಗ್ಗೆ ಜನತೆಯಲ್ಲಿ ಅರಿವು ಮೂಡಿಸಬಲ್ಲ ಕರಕುಶಲ ವಸ್ತು ಪ್ರದರ್ಶನಗಳನ್ನು ದೇಶ ಹಾಗೂ ಪರದೇಶಗಳಲ್ಲಿ ಏರ್ಪಡಿಸಲಾಯಿತು. ಪರಿಣಾಮವಾಗಿ ದೇಶ, ವಿದೇಶಗಳಲ್ಲಿ ಕರಕುಶಲ ಕಲಾ ವಸ್ತುಗಳಿಗೆ ಪ್ರೋತ್ಸಾಹ ಬೇಡಿಕೆಗಳು ಹೆಚ್ಚುತ್ತಾ ಬಂದವು. ಇದು ಅಧಿಕವಾದ ವಿದೇಶಿ ವಿನಿಮಯವನ್ನು ತರುವುದರ ಮೂಲಕ ಭಾರತ ಅಭಿವೃದ್ಧಿಶೀಲ ಆರ್ಥಿಕ ವ್ಯವಸ್ಥೆಯಲ್ಲಿ ಮಹತ್ವ ಪಾತ್ರವಹಿಸುತ್ತಿದೆ. ಇಂದು ಭಾರತದಾದ್ಯಂತ ಕರಕುಶಲಕಲೆಗಳು ಪುನರುಜ್ಜೀವನಗೊಂಡಿವೆ. ಭಾರತವು ಹಲವಾರು ಪ್ರಾದೇಶಿಕ ಭಿನ್ನತೆ ಹಾಗೂ ವಿಶೇಷತೆಗಳನ್ನು ಕಾಪಾಡಿಕೊಳ್ಳುತ್ತಾ ಹೊಸತನ್ನು ಅಂಗೀಕರಿಸುತ್ತಾ ಈ

ಕ್ಷೇತ್ರದಲ್ಲಿ ಸಾಧಿಸಿದ ಸಾಧನೆ ಗಮನಾರ್ಹವಾದುದ್ದಾಗಿದೆ. ಇಂದು ಭಾರತವು ಕರಕುಶಲ ಕಲೆಗಳ ಅಭಿವೃದ್ಧಿ ಹಾಗೂ ವಿಕಾಸಗಳಿಗಾಗಿ ಕೈಗೊಂಡ ಕ್ರಮಗಳು ಏಶಿಯಾ ಮತ್ತು ಆಫ್ರಿಕಾ ಮುಂತಾದ ಅಭಿವೃದ್ಧಿಶೀಲ ದೇಶಗಳಿಗೆ ಸ್ಫೂರ್ತಿದಾಯಕವೂ, ಮಾದರಿಯೂ ಆಗಿದೆ. ಅಸ್ತಿತ್ವ ಇದ್ದು, ಅದು ಶತಮಾನಗಳ ಉದ್ದಕ್ಕೂ ಬೆಳೆಯುತ್ತಾ ಬಂದಿರಬೇಕು. ಬೌದ್ಧ (ಜಾತಕ) ಹಾಗೂ ಜೈನ (ಉಪಸಗ) ಗ್ರಂಥಗಳಲ್ಲಿ ಐದು ನೂರು ಮೃತ್ತಿಕಾ ಶಿಲ್ಪಗಳ ಗ್ರಾಮವೊಂದರ ಪ್ರಸ್ತಾವನೆ ಇದೆ. ಸಾಂಚಿ ಸ್ತೂಪದಲ್ಲಿನ ಶಾಸನವೊಂದರಲ್ಲಿ ಸಮೀಪದ ವಿದೇಶ ನಗರದ ಹಸ್ತಿದಂತ ಶಿಲ್ಪಗಳ ಶ್ರೇಣಿಯ ಬಿಟ್ಟುಕೊಟ್ಟ ದಾನದ ವಿವರ ಇದೆ. ಇಂಥ ಹಲವು ಉದಾಹರಣೆಗಳನ್ನು ಭಾರತ ಭಿನ್ನ ಭಿನ್ನ ಪ್ರದೇಶಗಳಲ್ಲಿ ದೊರಕುವ ಶಾಸನ ಮುಂತಾದ ಪ್ರಾಚ್ಯದಾಖಲೆಗಳಲ್ಲಿ ಕಾಣಬಹುದಾಗಿದೆ.

ಹೀಗೆ ಪ್ರಾಚೀನ ಭಾರತದಲ್ಲಿ ಬಹಳಷ್ಟು ಪ್ರಭಾವಶಾಲಿಯಾಗಿದ್ದ ಕರಕುಶಲಗಳ ಸಂಘ ಅಥವಾ ಶ್ರೇಣಿಗಳು ಮಧ್ಯಕಾಲದವರೆಗೂ ಅತ್ಯುನ್ನತ ಸ್ಥಿತಿಯಲ್ಲಿದ್ದು ಅನಂತರದಲ್ಲಿ ತಮ್ಮ ಅಸ್ತಿತ್ವವನ್ನು ಕಳೆದುಕೊಂಡವು ಎನ್ನಬಹುದು.

ಪ್ರಾಚೀನ ಕಾಲದಿಂದ ಶ್ರೀಮಂತವಾಗಿ ಬೆಳೆದುಕೊಂಡು ಬಂದ ಕರಕುಶಲಕಲೆಗಳ ಪರಂಪರೆ ಉಳಿದುಕೊಂಡು ಬರುತ್ತಿದ್ದವಾದ್ದು ೧೮ನೆಯ ಶತಮಾನದ ಉತ್ತರಾರ್ಧದ ಹೊತ್ತಿಗೆ ಇನ್ನೂ ಶೋಚನೀಯ ಸ್ಥಿತಿಯನ್ನು ಕಾಣುವಂತಾಯಿತು. ಅದಕ್ಕೆ ಕೈಗಾರಿಕಾ ಕ್ರಾಂತಿ ಕಾರಣವಾಯಿತು. ಇದು ಕರಕುಶಲಿಗರ ಆರ್ಥಿಕ ಹಾಗೂ ಸಾಮಾಜಿಕ ಸ್ಥಿತಿ-ಗತಿಗಳನ್ನು ಮತ್ತಷ್ಟು ಹದಗೆಡಿಸಿತ್ತೆನ್ನಬಹುದು.

ಭಾರತದಲ್ಲಿ ಅಷ್ಟೇ ಅಲ್ಲ ಪ್ರಪಂಚದ ಕರಕುಶಲ ಕಲೆಗಳು ಬೆಳವಣಿಗೆಯಲ್ಲಿ ಇದೊಂದು ಸಂದಿಗ್ಧತೆಯ ಅವಧಿಯಾಗಿದೆ. ಆಗಲೆ ಕುಶಲಕಲೆಗಳ ಉಳಿವಿಗಾಗಿ ಪ್ರಪಂಚದ ತುಂಬಾ ಪ್ರಯತ್ನಗಳು ನಡೆಯತೊಡಗಿದವು. ೧೯ನೆಯ ಶತಮಾನದ ಪ್ರಾರಂಭದ ಹೊತ್ತಿಗಾಗಲೇ ಪ್ರಪಂಚದ ಅನೇಕ ದೇಶಗಳಲ್ಲಿ ಈ ಬಗೆಗೆ ಜಾಗೃತಿ ಉಂಟಾಗಿ ಅಲ್ಲಲ್ಲಿ ಚಳುವಳಿಯ ಸ್ವರೂಪವನ್ನು ಪಡೆಯಿತು. ಇಂಗ್ಲೆಂಡಿನಲ್ಲಿ ಜಾನ್ ರಸ್ಕಿನ್ ವಿಲಿಯಂ ಮಾರಿಸ್, ಸ್ವೀಡನ್ನಿನಲ್ಲಿ ಅರ್ಥರ್ ಡ್ಯಾಜಲಯಕ್ ಮುಂತಾದವರು ಚಳುವಳಿಗೆ ಒಂದು ಸ್ವರೂಪ ತಂದುಕೊಟ್ಟರು. ಇದು ೨೦ನೆಯ ಶತಮಾನದ ಪ್ರಾರಂಭಕ್ಕೆ ವ್ಯಾಪಕವಾದ ಪ್ರಚಾರ ಪಡೆದು ಕೈಗಾರಿಕಾ ಸಂಘ-ಸಂಸ್ಥೆಗಳ ಹುಟ್ಟಿಗೆ ಕಾರಣವಾಯಿತು.

ಬ್ರಿಟಿಷರ ಆಡಳಿತ ಧೋರಣೆ, ಯಂತ್ರೋಪಕರಣಗಳ ಬಳಕೆಯ ಹೆಚ್ಚಳಿಕೆ, ಯಂತ್ರ ನಿರ್ಮಿತ ವಸ್ತುಗಳ ಬಗೆಗೆ ಜನರಲ್ಲಿ ಬೆಳೆದು ಬಂದ ಮೋಹ ಇವು ಭಾರತದಲ್ಲಿನ ಕರಕುಶಲ ಕಲೆಗಳಿಗೆ ಮಾರಕವಾಗಿ ನಿಂತವು. ಸ್ವಾತಂತ್ರ್ಯಪೂರ್ವದ ಅವಧಿಯಲ್ಲಿಯೇ ಕರಕುಶಲ ಕಲಾಪರಂಪರೆಯ ಪುನಶ್ಚೇತನ ಕಾರ್ಯಗಳು ಆರಂಭವಾಗಿದ್ದರೂ ಅದು ಸಫಲವಾಗಲಿಲ್ಲ. ಸ್ವಾತಂತ್ರ್ಯ ನಂತರ ೧೯೫೧ರ ಪಂಚವಾರ್ಷಿಕ ಯೋಜನೆಯಲ್ಲಿ ಇದಕ್ಕೆ ಪ್ರಾಶಸ್ತ್ಯ ಸಿಕ್ಕಿತು. ಆಗ ಕರಕುಶಲಕಲೆಗಳ ಅಭಿವೃದ್ಧಿಯ ಕಾರ್ಯವನ್ನು ಖಾದಿ ಗ್ರಾಮೋದ್ಯೋಗ

ಮಂಡಳಿಗೆ ವಹಿಸಿ ಕೊಡಲಾಯಿತು. ಅನಂತರದಲ್ಲಿ ಕರಕುಶಲ ಕಲೆಗಳ ಅಭಿವೃದ್ಧಿಗಾಗಿ ವಿಶೇಷ ಸಂಸ್ಥೆಗಳ ಸ್ಥಾಪನೆಗೊಂಡವು.

ಗಾಂಧೀಜಿಯವರ ಸ್ವದೇಶಿ ಚಳುವಳಿಯು ಕುಶಲಕಲ ಪರಂಪರೆ ಹಾಗೂ ಕರಕುಶಲಿಗಳ ಸ್ಥಿತಿಗತಿಯತ್ತ ಲಕ್ಷ್ಯವನ್ನು ಸೆಳೆದಿತ್ತು ೧೯೫೨ರಲ್ಲಿ ಭಾರತ ಸರಕಾರವು ಅಖಿಲ ಭಾರತ ಕರಕುಶಲ ಮಂಡಳಿಯನ್ನು ಸ್ಥಾಪನೆ ಮಾಡಿತು. ಕಮಲಾದೇವಿ ಚಟ್ಟೋಪಾಧ್ಯಾಯ ಅವರನ್ನು ಈ ಮಂಡಲಿಯ ಅಧ್ಯಕ್ಷರನ್ನಾಗಿ ನೇಮಕ ಮಾಡಲಾಯಿತು. ಆಗ ಭಾರತದಾದ್ಯಂತ ಇದ್ದ ಕರಕುಶಲ ಕಲೆಗಳ ಕುಶಲಕರ್ಮಿಗಳ ಕುರಿತಾದ ಯಾವ ಮಾಹಿತಿಯು ಲಭ್ಯವಿರಲಿಲ್ಲ. ಇದನ್ನು ಲಕ್ಷಿಸದ ಅವರು ಭಾರತದುದ್ದಕ್ಕೂ ಸಮೀಕ್ಷೆ ಕೈಕೊಂಡಾಗ ಒಂದೊಂದು ಪ್ರದೇಶದಲ್ಲಿ ಸಾವಿರಾರು ಸಂಖ್ಯೆಯಲ್ಲಿ ಕುಶಲಕರ್ಮಿಗಳು ಮತ್ತು ಅನೇಕ ಕರಕುಶಲ ಕಲೆಗಳು ಇದ್ದುದು ಕಂಡುಬಂದಿತು.

ಅನಂತರ ಅರ್ಥಶಾಸ್ತ್ರಜ್ಞರು ಸಮಾಜ ಕಾರ್ಯಕರ್ತರು ಹಾಗೂ ಮಾರುಕಟ್ಟೆ ಪರಿಣತರನ್ನು ಒಳಗೊಂಡ ಒಂದು ಸಮಿತಿಯು ಕಮಲಾದೇವಿ ಚಟ್ಟೋಪಾಧ್ಯಾಯ ಅವರ ನೇತೃತ್ವದಲ್ಲಿ ವ್ಯಾಪಕವಾದ ಸಮೀಕ್ಷೆಯನ್ನು ಕೈಗೊಂಡಿತು.

ಇತ್ತೀಚಿನ ದಿನಗಳಲ್ಲಿ ವಿಜ್ಞಾನ ಬೆಳೆದಂತೆ ಮನುಷ್ಯನ ಜ್ಞಾನ ಹೆಚ್ಚಿದೆ ಎಂದು ನಾವು ಭಾವಿಸುತ್ತೇವೆ, ನಿಜ. ಆದರೆ ವಿಜ್ಞಾನ ಎಷ್ಟೇ ಬೆಳೆದರೂ ಅದು ಮನುಷ್ಯನ ಜ್ಞಾನದ ಬೆಳವಣಿಗೆ ಹಾಗೂ ಬಳಕೆಯಿಂದ ಕೈಗಾರಿಕೆಗಳು ಬೆಳೆದು ಐಶ್ವರ್ಯ ಹೆಚ್ಚಾಗಿದೆ.[೨] ವಿದ್ಯುತ್ ಚಾಲಿತ ಯಂತ್ರಗಳಿಂದ ಮರದ ಮಾಧ್ಯಮ, ಕಾಷ್ಠಮಾಧ್ಯಮ, ಶಿಲೆಯ ಮಾದ್ಯವು, ಲೋಹ ಮಾದ್ಯಮಗಳಲ್ಲಿ ಸೂಕ್ಷ್ಮ ಕುಸುರಿ ಕೆತ್ತನೆಯ ಕೆಲಸವನ್ನು ನಾವು ಇಂದಿಗೂ ಕರ್ನಾಟಕದ ವಿವಿಧ ಪ್ರದೇಶಗಳಲ್ಲಿ ಕಾಣುತ್ತೇವೆ. ಪ್ರಮುಖವಾಗಿ ಚನ್ನಪಟ್ಟಣ ಕಲೆಯ ಪರಿಕರ ಕುರಿತು ಹೇಳುವುದಾದರೆ ಇಲ್ಲಿ ಹೆಚ್ಚಾಗಿ ಹಾಲೇಮರ ಮತ್ತು ಹರಗುಬಣ್ಣ ಪರಿಕರಗಳು ಬಳಕೆಯಾಗುತ್ತದೆ.

ಸಾಮಾನ್ಯವಾಗಿ ಆಟಿಕೆ ಸಾಮಾನುಗಳು ಇನ್ನೂ ಮುಂತಾದವುಗಳನ್ನು ನಿರ್ಮಿಸುವಾಗ ಮರ, ಹುಳಿ, ಚಮಟಿಕೆ, ವಿದ್ಯುತ್ ಯಂತ್ರದ ಮೂಲಕ ಹೆಚ್ಚಾಗಿ ಆಟಿಕೆ ಪರಿಕರಗಳು ಚನ್ನಪಟ್ಟಣದ ಕಲೆಗೆ ಮಾತ್ರ ಸೀಮಿತಗೊಂಡು ನಿರ್ಮಾಣವಾದ ಕಲಾಕೃತಿಗಳಾಗಿವೆ.

---

೨. ಶಂಕರಪಾಟೀಲ, ಚಿತ್ರಕಲಾ ಚಿಂತನೆ, ಪು.೬೩

ಚನ್ನಪಟ್ಟಣದ ಗೊಂಬೆ ತಯಾರಿಕೆಯು ರಾಷ್ಟ್ರ ಮತ್ತು ಅಂತರಾಷ್ಟ್ರೀಯ ಮಟ್ಟದಲ್ಲಿ ತನ್ನದೇ ಆದ ವಿಶಿಷ್ಟವಾದ ಮನ್ನಣೆಯನ್ನು ಪಡೆದಿದೆ. ಈ ಗೊಂಬೆಗಳ ತಯಾರಿಕೆಯಲ್ಲಿ ಮುಖ್ಯವಾಗಿ, ಹಾಲೆಮರ, ರೋಜ್‌ವುಡ್, ಸಿಲ್ವರ್‌ವುಡ್, ಸಿಲ್ವರ್ ಟ್ರಿ, ರೆಡ್‌ಸಿಟಾಕ್, ಸಾಗವಾನಿ ಮತ್ತು ನೀಲಗಿರಿ ಮುಂತಾದ ಮರಗಳಿಂದ ಈ ಬೊಂಬೆಗಳನ್ನು ತಯಾರಿಸುತ್ತಾರೆ.

ಗೊಂಬೆಗಳ ತಯಾರಿಕೆಯಲ್ಲಿ ಹಾಲೆಮರಕ್ಕೆ ಹೆಚ್ಚಿನ ಮಹತ್ವವಿದೆ. ಕಾರಣ ಮರವನ್ನು ಸ್ಥಳೀಯವಾಗಿ ಕೂಡ್ಲಿಗೆ, ಪಾಲೆ, ಹಾಲೆ, ಕೂಡಮುರುಕ, ಹಾಗೂ ಮುಸಲ್ಮಾನರು ದೂದಿಲಕಡಿ ಎಂದು ಸಸ್ಯ ಪ್ರಭೇದವನ್ನು ಅನೇಕ ಹೆಸರಿನಿಂದ ಸ್ಥಳೀಯರು ಕರೆಯುತ್ತಾರೆ.

ಮರಗಳನ್ನು ಹೆಚ್ಚಾಗಿ ಹಳೆ ಮೈಸೂರಿನ ಸುತ್ತಮುತ್ತಲ ಪ್ರದೇಶಗಳಲ್ಲಿ ಅನೇಕ ಕಡೆ ಬೆಳೆಯುತ್ತಾರೆ. ಸಸಿ ಬಿಳಿಬಣ್ಣದ ಸುಗಂಧ ಪುಷ್ಪಗಳನ್ನು ಬಿಡುವುದರಿಂದ ಕೆಲವು ದೇವಸ್ಥಾನಗಳ ಆವರಣದಲ್ಲಿಯೂ ಸಹ ನೆಟ್ಟು ಬೆಳೆಸಲಾಗಿದೆ. ಸಸಿಯನ್ನು ಗುಡ್ಡ, ಬೆಟ್ಟ, ಕಲ್ಲುಗಳ ನಡುವೆ ಸಹ ನೆಟ್ಟು ಬಹಳ ಸರಳವಾಗಿ ಬೆಳೆಸುವಂತಹ ಮರ ಇದಾಗಿದೆ. ಬಿಳಿಮಣ್ಣು, ಮಿಶ್ರಿತ ಕಲ್ಲು ಭೂಮಿಗಳಲ್ಲಿ ಬೀಜ ಬಿತ್ತನೆ ಮಾಡಿಯೂ ಸಹ ಸಸಿಗಳನ್ನು ಬೆಳೆಸಲಾಗಿದೆ.

ಸಾಮಾನ್ಯವಾಗಿ ಈ ಪ್ರಭೇದವು ಚಳಿಗಾಲದ ಸಮಯದಲ್ಲಿ ಎಲೆ ಉದುರಿ ಹೊಸದಾಗಿ ಚಿಗುರುತ್ತದೆ. ಗಿಡದಿಂದ ಬಿಳುಪು ಅಥವಾ ಹಳದಿ, ಪರಿಮಳಯುಕ್ತ ಬಣ್ಣವುಳ್ಳ ಗೊಂಚಲಾಗಿ ಮಾರ್ಚ್ ಹಾಗೂ ಏಪ್ರಿಲ್‌ನಲ್ಲಿ ಹೂ ಬರುತ್ತದೆ.

ಈ ಮರದ ತೊಗಟೆ ಕಂದು ಮಿಶ್ರಿತ ಬೂದು ಬಣ್ಣದಿಂದ ಕೂಡಿರುತ್ತದೆ. ಮರದ ಖಂಡ ಭಾಗವು (ಒಳ ಬಿಳುಪಾಗಿರುತ್ತದೆ) ಅದಕ್ಕಾಗಿಯೇ ಇದನ್ನು ಪಾಲೆ, ಆಲೆ, ಹಾಲು ಮರವೆಂದು ಕರೆಯಲಾಗುತ್ತದೆ.

ಈ ಮರದ ಬಲಿತ ಎಳೆಗಳು ಕ್ರಮವಾಗಿರುವುದರಿಂದ ಕೊರೆಯುವುದಕ್ಕೂ ಬಹಳ ಗುಣಮಟ್ಟವಾಗಿದ್ದು ಮರವು ಗಟ್ಟಿಯಾಗಿರುವುದರಿಂದ ಪುರಾತನ ಕಾಲದಿಂದಲೂ ಮರದಿಂದ ಬುಗುರಿ, ಆಟದ ಬೊಂಬೆ ಹಾಗೂ ವಿವಿಧ ಮಾಧರಿಯ ವಿಗ್ರಹಗಳನ್ನು ಕೆತ್ತಿ ತಯಾರಿಸಿದ ವಸ್ತುಗಳಿಗೆ ಸಂಗ್ರಹಾಲಯ ಹಾಗೂ ಇತರ ಪ್ರವಾಸಿಗರ ಯಾತ್ರ ಸ್ಥಳದಲ್ಲಿ ಹೆಚ್ಚಿನ ಬೇಡಿಕೆ ಇರುತ್ತದೆ. ಮರದಿಂದ ತಯಾರಿಸಿದ ವಸ್ತುಗಳಿಂದ ಮಾರಾಟ ಮಾಡಿ ಹಣವನ್ನು ಗಳಿಸಬಹುದಾಗಿದೆ. ಮರದ ಪುಡಿಯಿಂದ ಊದು ಬತ್ತಿಯನ್ನು ತಯಾರಿಸಲಾಗುತ್ತಿದೆ.

ಇದರ ಎಲೆಯು ಒಣಗಿದಾಗ ಕಪ್ಪು ಬಣ್ಣಕ್ಕೆ ತಿರುಗುತ್ತದೆ. ಇದರಿಂದ ಹಿಂದೆ ನೀಲಿ ಬಣ್ಣ ತೆಗೆಯಲು ಉಪಯೋಗಿಸುತ್ತಿದ್ದರಂತೆ. ಕೆಲವಡೆ ಇದರ ಎಲೆ ಹಾಗೂ ಕಾಯಿಗಳನ್ನು ತರಕಾರಿಯ ರೂಪದಲ್ಲಿ ಬಳಸುವುದುಂಟು ಇದರ ಚಕ್ಕೆ ಮತ್ತು ಬೀಜ ಎರಡನ್ನು ಔಷಧಿಗಾಗಿ ಉಪಯೋಗಿಸುತ್ತಾರೆ. ಇತ್ತೀಚಿನ ದಿನಗಳಲ್ಲಿ ಈ ಮರದ ಬೇಡಿಕೆ ದಿನೇ ದಿನೇ ಹೆಚ್ಚುತ್ತಿರುವುದರಿಂದ ಈ ಮರವನ್ನು ಹೆಚ್ಚಾಗಿ ಬೆಳೆಸಿ ರೈತರು ಮತ್ತು ಅರಣ್ಯ ಇಲಾಖೆಯವರು ಹಣವನ್ನು ಗಳಿಸುತ್ತಿದ್ದಾರೆ.

ಈ ಮರವು ಇಂದಿನ ಮಾರುಕಟ್ಟೆ ಬೆಲೆ ಒಂದು ಟನ್ನಿಗೆ ೨೫೦ರಿಂದ ೩೫೦ ರೂ.ಗಳು. ಇತ್ತೀಚಿನ ದಿನಗಳಲ್ಲಿ ಈ ಮರದ ಬೇಡಿಕೆ ಹೆಚ್ಚಿದ್ದು, ಚನ್ನಪಟ್ಟಣ ಸುತ್ತಮುತ್ತಲು ಹಾಗೂ ಮೈಸೂರಿನ ಸುತ್ತಮುತ್ತಲು ಇದು ಒಂದು ಆರ್ಥಿಕ ಬೆಳೆಯಾಗಿರುತ್ತದೆ.

ಆದರೆ ದುಬಾರಿ ಜಾತಿಯ ಮರಗಳ ಬಳಕೆಯು ಕಾರ್ಮಿಕನಿಗೂ ಹೆಚ್ಚು ದುಬಾರಿಯಾಗುತ್ತದೆ. ಅಲ್ಲದೇ ದುಬಾರಿ ಮರಗಳ ಬಳಕೆಯಿಂದ ಮಾಡಿದ ವಸ್ತುಗಳು ತಾನು ಅಂದುಕೊಂಡ ರೀತಿಯಲ್ಲಿ ಮಾರುಕಟ್ಟೆಯಲ್ಲಿ ಬೆಲೆಗಳು ದೊರಕುವುದಿಲ್ಲ. ಆದ್ದರಿಂದ ಸುಲಭ ರೀತಿಯಲ್ಲಿ ಕಾರ್ಮಿಕನಿಗೂ ಹಾಗೂ ಕೊಂಡುಕೊಳ್ಳುವ ಜನರಿಗೂ ಸರಳವಾದ ಹಾಗೂ ದುಬಾರಿಯಲ್ಲಾದ ರೀತಿಯಲ್ಲಿ ಮರವನ್ನು ವಸ್ತುಗಳ ನಿರ್ಮಾಣದಲ್ಲಿ ಬಳಸುವುದು ಯೋಗ್ಯವಾಗಿದೆ.

ಈ ಬೊಂಬೆಗಳ ತಯಾರಿಕೆಯಲ್ಲಿ ಹಾಲೆ ಮರಕ್ಕೆ ಹೆಚ್ಚಿನ ಮಹತ್ವವಿದೆ. ಕಾರಣ ಬೇರೆಲ್ಲಾ ಮರಗಳಿಗಿಂತ ಹೇರಳವಾಗಿ ಸಿಗುವ ಮರವೇ "ಆಲೆಮರ" ಅಲ್ಲದೆ ಈ ಮರವು ಮೃದುವಾಗಿ, ನುಣುಪಾಗಿರುತ್ತದೆ. ಮರವು ಗೊಂಬೆಗಳ ತಯಾರಿಕೆಯಲ್ಲಿ ಕಾರ್ಮಿಕನ ಕಲಾ ನೈಪುಣ್ಯಕ್ಕೆ ಅನುಸಾರವಾಗಿ ಸುಲಭವಾದ ರೀತಿಯಲ್ಲಿ ಗೊಂಬೆಗಳು ರೂಪುಗೊಳ್ಳುತ್ತವೆ. ಆಲೆಮರವು ಕಾರ್ಮಿಕನಿಗೆ ಸುಲಭವಾಗಿ ದುಬಾರಿಯಲ್ಲದ ರೀತಿಯಲ್ಲಿ ಸಿಗುವ ಮರ ಅದಲ್ಲದೇ ಈ ಹಾಲೆಮರದ ಸಂರಕ್ಷಣೆಗೆ ರಾಜ್ಯ ಸರಕಾರದಿಂದ ಮತ್ತು ಅನೇಕ ಸಂಘ-ಸಂಸ್ಥೆಯವರು ಆಲೆಮರವನ್ನು ಬೆಳೆಸಿ ಉಳಿಸುವ ಮಹತ್ವದ ಯೋಜನೆಯನ್ನು ಹಾಕಿಕೊಂಡಿದ್ದಾರೆ. ಈ ಮರದ ಇನ್ನೊಂದು ವಿಶಿಷ್ಟತೆಯೆಂದರೆ ಎಷ್ಟು ಬಾರಿ ಕಡಿದರೂ ಸಹ ಅತಿ ಬೇಗನೆ ಚಿಗುರುತ್ತವೆ. ಮರದ ದೊಡ್ಡ ದೊಡ್ಡ ರೆಂಬೆಗಳಲ್ಲಿ ದೊಡ್ಡದಾದ ವಸ್ತುಗಳನ್ನು ತಯಾರಿಕೆ ಮಾಡುವುದಕ್ಕೆ ಉಪಯೋಗಿಸಿಕೊಳ್ಳಲಾಗುತ್ತದೆ. ಅದೇ ಚಿಕ್ಕದಾದ ರಂಬೆಗಳಿಂದಲೂ ಸಹ ಅನೇಕ ರೀತಿಯ ಸಣ್ಣ ಸಣ್ಣ ವಸ್ತುಗಳನ್ನು ತಯಾರು ಮಾಡಲಾಗುತ್ತದೆ. ಒಟ್ಟಾರೇ ಹೇಳಬೇಕೆಂದರೆ ಮರದ ಭಾಗಗಳನ್ನು ಆಯಾ ವಸ್ತುಗಳ ಆಕಾರಕ್ಕೆ ಕಡಿದು ಮಾರಾಟ ಮಾಡಲಾಗುತ್ತದೆ. ಕಾರ್ಮಿಕನು ಮರದ ತುಂಡುಗಳನ್ನು ಖರೀದಿಸಿ ಅವುಗಳನ್ನು ತಾನು ತಯಾರಿಸುವ ವಸ್ತುಗಳ ಅಳತೆಗೆ ತಕ್ಕಷ್ಟು ಅವುಗಳನ್ನು ಚಿಕ್ಕ ಚಿಕ್ಕ ಭಾಗಗಳಾಗಿ ತುಂಡುಗಳನ್ನು ಬಿಸಿಲಿನಲ್ಲಿ ಒಣಗಿಸಲಾಗುತ್ತದೆ. ಈ ಮರವು ಸರಿಯಾದ ರೀತಿಯಲ್ಲಿ ಒಣಗಿಸದಿದ್ದರೆ ತಯಾರಿಸುವ ಸಾಮಾಗ್ರಿಗಳಲ್ಲಿ ಹೊಳಪು ಬರುವುದಿಲ್ಲ. ಮತ್ತು ಆ ವಸ್ತುಗಳನ್ನು ತಯಾರಿಸಿದ ಕೆಲವು ದಿನಗಳಲ್ಲಿ ಅವುಗಳಲ್ಲಿ ಬಿರುಕು ಕಾಣಿಸುತ್ತವೆ. ಆದ್ದರಿಂದ ಈ ಮರವನ್ನು ಸೂಕ್ತವಾದ ರೀತಿಯಲ್ಲಿ ಬಿಸಿಲಿನಲ್ಲಿ ಒಣಗಿಸಬೇಕಾಗುತ್ತದೆ. ಕಾರ್ಮಿಕರು ಈ ವೃತ್ತಿಯನ್ನು ೧೨ ತಿಂಗಳುಗಳ ಕಾಲವು ನಡೆಸುವುದರಿಂದ ಮಳೆಗಾಲ ಹಾಗೂ ಚಳಿಗಾಲ ಇಂತಹ ಕಾಲದಲ್ಲಿ ಸಾಮಾಗ್ರಿಗಳ ತಯಾರಿಕೆ ಮಾಡಬೇಕಾದುದರಿಂದ ಮರವನ್ನು ಹೆಚ್ಚಾಗಿ ಸಂಗ್ರಹಿಸಿಕೊಂಡು ಚೆನ್ನಾಗಿ ಒಣಗಿಸಿಕೊಂಡು ಇಟ್ಟುಕೊಳ್ಳುತ್ತಾರೆ. ಇದಲ್ಲದೆ ಇನ್ನೂ ಕೆಲವು ದುಬಾರಿ ಮರಗಳಿಂದಲೂ ಸಹ ಗೊಂಬೆಗಳನ್ನು ತಯಾರಿಸುತ್ತಾರೆ.

**ಮರ ಹದಗೊಳಿಸುವಿಕೆ :** ಯಾವುದೇ ಕಡಿದ ಮರವನ್ನು ನೇರವಾಗಿ ಉಪಯೋಗಿಸಲಾಗದು. ಸಂಸ್ಕರಿಸಬೇಕು. ಮರದ ಬಾಳಿಕೆ ಹಾಗೂ ಬಾಳಿಕೆಯನ್ನು ಹೆಚ್ಚಿಸಲು ಹದಗೊಳಿಸಬೇಕು. ಮರದ ಸಂಸ್ಕರಣೆಯಲ್ಲಿ ಹದಗೊಳಿಸುವುದು ಒಂದು ಘಟ್ಟ. ಕಡಿದ ಮರದಲ್ಲಿ ನೀರಿನಾಂಶ ಇರುತ್ತದೆ. ಇದನ್ನು ಮರದಿಂದ ತೆಗೆಯುವ ಕಾರ್ಯಕ್ಕೆ ಮರ ಹದಗೊಳಿಸುವುದು ಎನ್ನುತ್ತಾರೆ. ಮರವನ್ನು ಹದಗೊಳಿಸದೆ ಮರದಿಂದ ಯಾವ ಕೆಲಸವೂ ಸಾಧ್ಯವಿಲ್ಲ. ಹದಗೊಳಿಸುವುದರಿಂದ ಮರದ ಗಟ್ಟಿತನ ಹಾಗೂ ಸಾಮರ್ಥ್ಯವನ್ನು ಹೆಚ್ಚುತ್ತದೆ. ಮರದಲ್ಲಿ ನೀರಿನಾಂಶವಿದ್ದರೆ ಮರ ಬೇಗನೆ ಕೊಳೆತು ಹೊಗುತ್ತದೆಯಾದ್ದರಿಂದ ಹದಗೊಳಿಸುವುದು ಅವಶ್ಯಕ. ಅಗ ನೀರು ಇಲ್ಲದಾಗಿ ಮರದ ತೂಕ ಮೊದಲು ಇರುವುದಕ್ಕಿಂತ ಮೂರನೆಯ ಒಂದರಷ್ಟು ಕಡಿಮೆಯಾಗುತ್ತದೆ. ಇದರಿಂದ ಮರಗಳ ಸಾಗಾಣಿಕೆ ಸುಲಭವಾಗಿ ಹಾಗೂ ಅನುಕೂಲವಾಗುತ್ತದೆ.

ಸಾಮಾನ್ಯವಾಗಿ ಕತ್ತರಿಸಿದ ಮರವನ್ನು ಹಾಗೆಯೇ ಗಾಳಿಯಲ್ಲಿ ಇರಬಿಟ್ಟು ನೀರಿನ ಅಂಶ ಕಡಿಮೆ ಆಗುವಂತೆ ಮಾಡಲಾಗುತ್ತದೆ. ಇದು ತುಂಬಾ ನಿಧಾನವಾದ ಕಾರ್ಯ. ಮರವನ್ನು ೭ ರಿಂದ ೧೨ ಗಂಟೆಯೊಳಗೆ ಹದಗೊಳಿಸಬಹುದಾಗಿದೆ. ಇದಕ್ಕಾಗಿ ಮರವನ್ನು ನಿರ್ವಾತ ಕೋಶ ಒಂದರಲ್ಲಿಟ್ಟು ಅಡಿಯಿಂದ ಉಷ್ಣತೆ ಒದಗಿಸಿ ಮರದಲ್ಲಿರುವ ನೀರಿನ ಅಂಶವನ್ನು ಅವಿಯಾಗುವಂತೆ ಮಾಡಲಾಗುತ್ತದೆ. ಮರ ಹದಗೊಳಿಸುವಿಕೆಗೆ ಒಂದು ವಿಶಾಲವಾದ ಸ್ಥಳವನ್ನು ಆರಿಸಿಕೊಂಡು ಮರದ ಹಲಗೆ ಇತ್ಯಾದಿಗಳನ್ನು ರೂಪಿಸಿಕೊಳ್ಳಬಹುದು.

ಚನ್ನಪಟ್ಟಣ ತಾಲ್ಲೂಕಿನಲ್ಲಿ, ಅದರಲ್ಲಿ ಇಲ್ಲಿನ ಮುಸಲ್ಮಾನ ಸಮುದಾಯದವರು ಈ ಬೊಂಬೆ ತಯಾರಿಕೆಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವುದನ್ನು ನೋಡಬಹುದಾಗಿದೆ. ಇದಲ್ಲದೇ ಸುಮಾರು ನೂರು ವರ್ಷಗಳ ಹಿಂದಿನ ಇತಿಹಾಸದಿಂದಲೂ ಕರಕುಶಲ ಕೈಗಾರಿಕೋದ್ಯಮವನ್ನು ನಡೆಸಿಕೊಂಡು ಬಂದಿದ್ದಾರೆ.

ಮೊದಲಿಗೆ ಬಾಸ್ಮಿಯಾ ಎಂಬ ವ್ಯಕ್ತಿ ಹಾಲೆ ಮರದಿಂದ ಬೊಂಬೆ ತಯಾರಿಸುವುದನ್ನು ಕಂಡುಹಿಡಿದನು. ಕಲೆಗಾರಿಕೆಯಾಗಿ ಮುಂದುವರೆಸಿಕೊಂಡು ಅತ್ಯಂತ ಉತ್ತಮ ರೀತಿಯಲ್ಲಿ ಬೊಂಬೆ ತಯಾರಿಕೆಯಾಗುತ್ತಿತ್ತು. ಆಟದ ಸಾಮಾಗ್ರಿಗಳನ್ನು, ವಿವಿಧ ರೀತಿಯ ಗೊಂಬೆಗಳನ್ನು, ಬುಗರಿ ಇತ್ಯಾದಿಗಳನ್ನು ಕೈಯಿಂದಲೇ ಕೆಲವು ಉಪಕರಣಗಳಾದ ಬಾಚಿ, ಕತ್ತಿ ಮತ್ತು ಕುಡುಗೋಲು ಇಂತಹವುಗಳನ್ನು ಉಪಯೋಗಿಸಿ ಬೊಂಬೆ ತಯಾರಿಕೆಯಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿದ್ದರು. ಇದೇ ರೀತಿಯಾಗಿ ಮುಂದುವರೆದು ಈ ಕಲೆಯನ್ನು ಸುಮಾರು ಸ್ನೇಹಿತರು, ಸಂಬಂಧಿಗಳು ಹಾಗೂ ರೀತಿಯಲ್ಲಿ ಆಸಕ್ತಿ ಹೊಂದಿದವರಿಗೆ ಕಲೆಯನ್ನು ಕಲಿಸಿಕೊಟ್ಟು ಕಲೆಯನ್ನು ಬೆಳೆಸುವಲ್ಲಿ ಪ್ರಮುಖ ಪಾತ್ರವನ್ನು ವಹಿಸಿದ್ದಾರೆಂದು ತಿಳಿದು ಬಂದಿದೆ.

ಇದೇ ರೀತಿಯಾಗಿ ಕಲೆಯು ಮುಂದುವರೆದು ಚನ್ನಪಟ್ಟಣದಲ್ಲಿ ನೆಲೆಯೂರಿತು. ಹಾಲೆ ಮರದಿಂದ ಅನೇಕ ರೀತಿಯ ಗೊಂಬೆಗಳು, ಆಟಿಕೆಗಳು ಮತ್ತು ಪಾಠ ಪ್ರಯೋಜಕ ಉಪಕರಣಗಳು ಇತ್ಯಾದಿಗಳನ್ನು ಮಾಡುವುದರಲ್ಲಿ ಪ್ರಸಿದ್ಧಿಯನ್ನು ಹೊಂದಿದರು. ಇದೇ ರೀತಿಯಾಗಿ ಕಲೆಗಾರರು ಹೆಚ್ಚುತ್ತಾ ಸದರಿ ಕರಕುಶಲ

ಕೈಗಾರಿಕೆಯನ್ನು ಕಸುಬಾಗಿ ಹಾಗೂ ಜೀವನೋಪಾಯವಾಗಿ ಕೆಲವು ಕುಟುಂಬಗಳು ಆಸಕ್ತರಾಗಿ ಸ್ವತಃ ಮನೆಯಲ್ಲಿಯೇ ಕರಕುಶಲ ಕೈಗಾರಿಕೆಯನ್ನು ಮುಂದುವರೆಸುತ್ತಾ ಬಂದಿದ್ದಾರೆ.

ಚನ್ನಪಟ್ಟಣ ಕರಕುಶಲ ಕೈಗಾರಿಕೆಗೆ ಪ್ರಸಿದ್ಧಿ ಪಡೆದಂತೆಲ್ಲಾ ಕಲೆಗಾರರಿಗೆ ಪ್ರೋತ್ಸಾಹ ಕೊಡುತ್ತಿದ್ದರು. ಕರಕುಶಲ ಕೈಗಾರಿಕೆಗೆ ಹೆಚ್ಚಿನ ರೀತಿಯಲ್ಲಿ ಅಭಿವೃದ್ಧಿಪಡಿಸುವ ಸಲುವಾಗಿ ೧೯೭೧ರಲ್ಲಿ ಕರ್ನಾಟಕ ರಾಜ್ಯ ಕರಕುಶಲ ಅಭಿವೃದ್ಧಿ ನಿಗಮ ನಿಯಮಿತ ಇವರು ಚನ್ನಪಟ್ಟಣದಲ್ಲಿ ಅರಗು ಕುಶಲ ಕಲಾ ಸಂಕೀರ್ಣವನ್ನು ಪ್ರಾರಂಭಿಸಿ ಕರಕುಶಲ ಕಾರ್ಮಿಕರುಗಳಿಗೆ ಉತ್ತಮ ತರಬೇತಿ ಹಾಗೂ ಹೊಸ ಹೊಸ ರೀತಿಯ ವಿನ್ಯಾಸಗಳ ಪರಿಚಯ ಮಾಡಿಸುತ್ತಿದ್ದರು. ಗೊಂಬೆ ತಯಾರಿಕೆಯಲ್ಲಿ ಬೇಕಾಗುವಂತಹ ಸಾಮಾಗ್ರಿಗಳು ಮತ್ತು ಗೊಂಬೆ ತಯಾರಿಕೆಗೆ ಬೇಕಾಗುವಂತಹ ಮರದ ಪೂರೈಕೆ ಹಾಗೂ ಮರವನ್ನು ಹದ ಮಾಡುವ ವಿದ್ಯುತ್ ಯಂತ್ರದ ಅಳವಡಿಕೆ ಮಾಡಿಕೊಟ್ಟು ಕುಶಲ ಕರ್ಮಿಗಳನ್ನು ಪ್ರೋತ್ಸಾಹಿಸಿ ಕಲೆಯನ್ನು ಉಳಿಸುವಲ್ಲಿ ಸಂಘ ಸಂಸ್ಥೆಗಳು ಶ್ರಮಿಸಿವೆ.

ಚನ್ನಪಟ್ಟಣದ ಗೊಂಬೆಗಳನ್ನು ಎರಡು ರೀತಿಯಲ್ಲಿ ತಯಾರಿಸಲಾಗುತ್ತದೆ.

೧. ಹಳೆಯದಾದ ಪಟ್ರಿ ಪದ್ಧತಿ

೨. ಆಧುನಿಕ ರೀತಿಯ ಪವರ್ ಲೇತ್ ಪದ್ಧತಿ

**೧. ಪಟ್ರಿ ಪದ್ಧತಿ (ಹ್ಯಾಡ್‌ಲೇಟ್) :** ಚನ್ನಪಟ್ಟಣದ ಗೊಂಬೆ ತಯಾರಿಕೆಯಲ್ಲಿ ಮೊಟ್ಟಮೊದಲು ಪಟ್ರಿ (ಹ್ಯಾಡ್‌ಲೇಟ್) ಎಂಬ ಯಂತ್ರದಿಂದ ಕೈಯಿಂದಲೇ ನಡೆಸುವಂತಹ ಉಪಕರಣವಿದಾಗಿತ್ತು. ಪಟ್ರಿಗೆ ಅನೇಕ ವರ್ಷಗಳ ಇತಿಹಾಸವನ್ನು ನಾವು ಕಾಣಬಹುದು. ಹಳೆಯ ಪದ್ಧತಿಯನ್ನು ಮುಂದುವರೆಸಿಕೊಂಡು ಹೋಗುವಂತಹ ಅನೇಕ ಜನ ಕರಕುಶಲ ಕರ್ಮಿಗಳನ್ನು ನಾವು ಈಗಲೂ ಚನ್ನಪಟ್ಟಣದ ಸುತ್ತ-ಮುತ್ತ ಹಳ್ಳಿಗಳಲ್ಲಿ ನೋಡಬಹುದಾಗಿದೆ.

**ಪಟ್ರಿ ನಿರ್ಮಿಸುವ ವಿಧಾನ :** ಮೊದಲು ಎರಡು ೫ ಅಡಿಯ ಉದ್ದದ ಸಮನಾಂತರವಾದ ದಪ್ಪನೆಯ ಮರದ ತುಂಡುಗಳನ್ನು ಎದುರು ಬದುರಾಗಿ ಇಟ್ಟು, ಈ ಎರಡು ಮರದ ತುಂಡುಗಳನ್ನು ಸಾಗಿಸುವಲ್ಲಿ ಇವುಗಳ ಮೇಲೆ ಒಂದು ಪಟ್ಟಿಯನ್ನು ಜೋಡಿಸಿರುತ್ತಾರೆ. ಈ ಪಟ್ಟಿಯ ಮುಂದಕ್ಕೆ ಒಂದು ಕಬ್ಬಿಣದ ಪಟ್ಟಿಯನ್ನು ಸಹ ಆಳವಡಿಸಿರುತ್ತಾರೆ. ದಪ್ಪನೆಯ ಮರದ ತುಂಡಿನ ಮುಂದಿನ ತುದಿಯಲ್ಲಿ ಎರಡು ಚೂಪಾದ ಮೊಳೆಗಳನ್ನು ಮೊಳೆಗೆ ಚಂದ್ರಿಕೆಯನ್ನು ಅಳವಡಿಸುತ್ತಿರುತ್ತದೆ. ಈ ಚಂದ್ರಿಕೆಗೆ ಮತ್ತು ಎರಡು ಬದಿಯ ಮೊಳೆಯ ತುದಿಗೆ ಪಟ್ರಿ ತಯಾರಿಸುವಂತಹ ಮರದ ಕಟ್ಟಿಗೆಯನ್ನು ಅಳವಡಿಸಿ ಕೊಳ್ಳಲಾಗುತ್ತದೆ. ಈ ತುದಿಗೆ ೫-೬ ಅಡಿಯಷ್ಟು ಒಂದು ಮರದ ಕೋಲನ್ನು ತೆಗೆದುಕೊಂಡು ಇದರ ಮುಂದಿನ ತುದಿಯನ್ನು ಮತ್ತು ಹಿಂದಿನ ತುದಿಗೆ ದಾರವನ್ನು ಕಟ್ಟಿರುತ್ತಾರೆ. ಹಿಂದಿನ ತುದಿಗೆ ಕೈಯಲ್ಲಿ ಹಿಡಿದುಕೊಳ್ಳುವಂತಹ ರೀತಿಯ ಕೈ ಹಿಡಿಯನ್ನು ಮಾಡಿರಲಾಗುತ್ತದೆ. ಇದನ್ನು ಬಿಲ್ಲಿನ ಕೋಲು ಎಂದು ಕರೆಯಲಾಗುತ್ತದೆ. ಬಿಲ್ಲಿನ ಕೋಲನ್ನು ಮರದ ಮುಂದಿನ ತುದಿಯಲ್ಲಿ ಆಳವಡಿಸಲಾಗಿದ್ದು, ಚಂದ್ರಿಕೆಗೆ ಒಂದು ತುದಿಯ ಬಿಲ್ಲಿನ ಕೋಲಿನ ದಾರವನ್ನು ಸುತ್ತಿರುತ್ತಾರೆ. ಬಲಗೈಯಿಂದ ಬಿಲ್ಲಿನ ಕೋಲನ್ನು ಎಳೆದಾಗ ಅಳವಡಿಸಿದ ಚಂದ್ರಿಕೆಯು ತಿರುಗುತ್ತದೆ. ಎಡಭಾಗದಲ್ಲಿ ಎಡಗೈ ಸಹಾಯದಿಂದ ಮಾತ್ರ ತಯಾರಿಸುವಂತಹ ಸಾಮಾನುಗಳನ್ನು ಉಳಿಗಳ ಸಹಾಯದಿಂದ ಕಟ್ಟಿಗೆಗೆ ಆಕಾರವನ್ನು ಕೊಡಲಾಗುತ್ತದೆ.

ಈ ಪಟ್ಟಿಯಂತ್ರದಿಂದ ೫.mm ಯಿಂದ ೨೫.mm ವರೆಗೆ  ಮಾತ್ರ ಕೆಲಸವನ್ನು ಮಾಡಬಹುದಾಗಿದೆ. ಪಟ್ಟಿಯ ಕೆಲಸದಲ್ಲಿ ಚಿಕ್ಕ ಚಿಕ್ಕ ಜೋಡಣೆ ಸಾಮಾನುಗಳನ್ನು ಮಾಡಬಹುದಾಗಿದೆ. ವಿದ್ಯುತ್, ಉಪಕರಣ ಯಂತ್ರದಿಂದ ನಿರುಪಯುಕ್ತವಾಗಿರುವಂತಹ ಸಣ್ಣ ಕಟ್ಟಿಗೆ ತುಂಡುಗಳಿಂದ ಕೆಲವು ಕಿವಿ ಓಲೆಗಳು ಉಂಗುರಗಳು ಕಾರಿನ ಹಿಂಬದಿಯಲ್ಲಿ ಹಾಕುವಂತ ಸೀಟಿನ ಮಣಿಗಳು, ನೆಕ್‌ಲೇಸಗಳು, ಕರ್‌ಟನ್, ರಿಂಗ್‌ಗಳು ಜೋಕರ್, ಜಂಡಿಗ್ ಬಾಲ್‌ಗಳು, ಚಪತಿಲಾವಣಿಗೆ ಮೇಣದ ಬತ್ತಿಯ ಸ್ಟಾಂಡ್‌ಗಳು ಇನ್ನೂ ಹಲವು ರೀತಿಯಾಗಿ ೧೦೦ರಿಂದ ಹಿಡಿದು ೧೫೦ ಸಾಮಾನುಗಳನ್ನು ಈ ಪಟ್ರಿಯಲ್ಲಿ ತಯಾರಾಗುತ್ತವೆ.

ಈ ಪಟ್ಟಿಯಿಂದ ಕೆಲಸವು ತುಂಬ ನಿಧಾನಗತಿಯಲ್ಲಿ ಸಾಗುತ್ತದೆ. ಪಟ್ಟಿಯಲ್ಲಿ ಒಂದು ಪಟ್ಟಿಗೆ ಒಬ್ಬರೆ ಕುಳಿತುಕೊಂಡು ಕೆಲಸವನ್ನು ಮಾಡಬೇಕಾಗುತ್ತದೆ. ಈ ಪಟ್ರಿ ಕೆಲಸಕ್ಕೆ ಆಕ್ಸ್‌ಪ್ರೇಮ್, ಅರ, ಮಟ್ಟ, ಉಳಿ, ಉಗುರು ಉಳಿ, ಸಣ್ಣ ಉಳಿ, ಮತ್ತು ಕಾಪಸ್ ಎಂಬಂತಹ ಉಪಕರಣಗಳನ್ನು ಬಳಸುತ್ತಾರೆ.

**೨. ಆಧುನಿಕ ರೀತಿಯ ಯಾಂತ್ರಿಕ ಪದ್ಧತಿ :** ಇತ್ತೀಚಿಗೆ ಚನ್ನಪಟ್ಟಣದ ಗೊಂಬೆಗಳನ್ನು ಪಾವರ್ ಲೇತ್ ಎಂಬ ವಿದ್ಯುತ್‌ಯಂತ್ರದಿಂದ ತಯಾರಿಸಲಾಗುತ್ತಿದೆ. ಚನ್ನಪಟ್ಟಣದಲ್ಲಿ ಮೊಟ್ಟಮೊದಲು ಪಟ್ರೆಯಿಂದಲೇ ಕೆಲಸವನ್ನು ಮಾಡುತ್ತಿದ್ದರು. ಚನ್ನಪಟ್ಟಣದ ಕರಕುಶಲ ಕೈಗಾರಿಕೆ ಪ್ರಸಿದ್ಧಿ ಪಡೆದಂತೆಲ್ಲಾ ಕಲೆಗಾರರಿಗೆ ಪ್ರೋತ್ಸಾಹ ಸಿಗುತ್ತಿತು. ಕುಶಲಕರ್ಮಿಯರಿಗೆ ಕರಕುಶಲ ಕೈಗಾರಿಕೆಗೆ ಹೆಚ್ಚಿನ ರೀತಿಯಲ್ಲಿ ಅಭಿವೃದ್ಧಿ ಪಡಿಸುವ ಸಲುವಾಗಿ ೧೯೭೧ರಲ್ಲಿ ಕರ್ನಾಟಕ ರಾಜ್ಯ ಕರಕುಶಲ ಅಭಿವೃದ್ಧಿ ನಿಗಮ ನಿಯಮಿತರವರು ಚನ್ನಪಟ್ಟಣದಲ್ಲಿ ಅರಗು ಕುಶಲ ಸಂಕೀರ್ಣ ಪ್ರಾರಂಭಿಸಿದ್ದರು. ಕರಕುಶಲ ಕರ್ಮಿಗಳಿಗೆ ೧ ವರ್ಷಗಳ ಕಾಲ ತರಬೇತಿಯನ್ನು ಕೊಟ್ಟಿದ್ದಲ್ಲದೇ ಇವರಿಗೆ ಸ್ಟೈಪೆಂಡ್ ರೂಪದಲ್ಲಿ ಹಣವನ್ನು ಕೊಡುತ್ತಿದ್ದರು. ಹೊಸ ಹೊಸ ರೀತಿಯ ವಿನ್ಯಾಸದ ಗೊಂಬೆಗಳನ್ನು ತಯಾರಿಸುವ ಬಗ್ಗೆ ಹಾಗೂ ಗೊಂಬೆಗಳನ್ನು ತಯಾರಿಸುವ ವಿಧಾನವನ್ನು ಆಸಕ್ತ ಅಭ್ಯರ್ಥಿಗಳಿಗೆ ತರಬೇತಿಕೊಡಲಾಯಿತು. ಈ ತರಬೇತಿಯ ಅವಧಿ ಮುಗಿದ ಮೇಲೆ ಇವರಿಗೆ ೧/೨ H.P ಬೇಬಿ ಲೇತ್‌ಗಳನ್ನು ವಿತರಿಸಲಾಯಿತು. ಈ ಯಂತ್ರದಲ್ಲಿ ಒಬ್ಬರೆ ಕುಳಿತುಕೊಂಡು ವಿದ್ಯುತ್ತಿನ ಸಹಾಯದಿಂದ ಕೆಲಸವನ್ನು ಮಾಡಬಹುದಾಗಿದೆ. ಇದೇ ರೀತಿಯಾಗಿ ಹೆಂಗಸರಿಗೂ ಮತ್ತು ಗಂಡಸರಿಗೂ ಸೇರಿಸಿ ಪ್ರತಿ ವರ್ಷ ಹೊಸ ಹೊಸ ಗುಂಪುಗಳಿಗೆ ತರಬೇತಿಯನ್ನು ಕೊಟ್ಟು ಅರ್ಧ ದುಡ್ಡನ್ನು ಕಟ್ಟಿಸಿಕೊಂಡು ಬೇಬಿಲೆತ್‌ಗಳನ್ನು ವಿತರಿಸಲಾಯಿತು.

ಈ ವಿದ್ಯುತ್ ಲೇತ್‌ನ್ನು ಜಾಸ್ತಿಆದ H.P.ಗಳಿಗೆ ಅಳವಡಿಸಿಕೊಂಡು ಉದಾಹರಣೆ ೩ H.P. ೪ರಿಂದ ೬ ಜನ ೩ H.P.ಗೆ ೬ರಿಂದ ೮. ೬ H.Pಗೆ ೮ರಿಂದ ೧೦ ಜನರೂ ೧೦ H.P.ಗೆ ೩೫ ಜನ ಕೆಲಸವನ್ನು ನಿರ್ವಹಿಸುವಂತೆ ಇವುಗಳನ್ನು ಮಾರ್ಪಡಿಸಿಕೊಳ್ಳಲಾಯಿತು.

**ಪವರ್‌ಲೇತ್ :** ಕರಕುಶಲ ಕರ್ಮಿಯು ತನಗೆ ಬೇಕಾಗುವಷ್ಟು H.P. Capacity ಮೋಟರನ್ನು ಅಳವಡಿಸಿಕೊಳ್ಳಬಹುದಾಗಿದೆ. ಈ ಮೋಟರಿಗೆ ಒಂದು ಬೆಲ್ಟ್‌ನ್ನು ಅಳವಡಿಸಿಕೊಂಡು ಇದಕ್ಕೆ ವಿದ್ಯುತ್ ಹರಿಸಿದಾಗ ಬೆಲ್ಟಿನ ಸಹಾಯದಿಂದ ಪುಲ್ಲಿ ತಿರುಗುತ್ತದೆ. ಈ ಪುಲ್ಲಿಗೆ ಇನ್ನೊಂದು ಬೆಲ್ಟನ್ನು ಅಳವಡಿಸಿಕೊಂಡು ಈ ಬೆಲ್ಟ್ ಲೇತ್‌ಗೆ ಸೇರಿಸಿರಲಾಗಿರುತ್ತದೆ. ಮೋಟರ್‌ಗೆ ವಿದ್ಯುತ್ ಹರಿಸಿದಾಗ ಪುಲ್ಲಿ ಸಹಾಯದಿಂದ ಲೇತ್ ತಿರುಗುತ್ತದೆ. ಈ ಲೇತ್ ಮುಂಭಾಗದಲ್ಲಿ ಮರದ ತುಂಡನ್ನು ಬಿಗಿಮಾಡಲು ಮತ್ತು ಸಡಿಲಗೊಳಿಸುವ ರೀತಿಯಲ್ಲಿ ವ್ಯವಸ್ಥೆಯನ್ನು ಈ ಲೇತ್‌ಗೆ ಅಳವಡಿಸಲಾಗಿರುತ್ತದೆ. ಈ ಲೇತ್‌ನ ಮುಂಭಾಗದಲ್ಲಿ ಚಂದ್ರಿಕೆ ಇರುತ್ತದೆ. ಇದಕ್ಕೆ ಮರದ ತುಂಡನ್ನು ಇಟ್ಟುಕೊಂಡು ಯಂತ್ರತಿರುಗಿದಾಗ ಹುಳಿಗಳ ಸಹಾಯದಿಂದ ತಾವು ತಯಾರಿಸುವಂತಹ ಸಾಮಾನುಗಳಿಗೆ ಆಕಾರವನ್ನು ಕೊಡಲಾಗುತ್ತದೆ. ಪವರ್ ಲೇತ್ ಯಂತ್ರಕ್ಕೆ ೬ ರೀತಿಯ ಉಳಿಗಳನ್ನು ಉಪಯೋಗಿಸಲಾಗುತ್ತದೆ. ೩ ರೀತಿಯ ಕೈವಾರಗಳನ್ನು (ಇದು ಮರದ ಅಳತೆಯನ್ನು ಒಂದು ಸಮಾನವಾಗಿ ಇರುವಂತೆ ಅಳತೆ ಮಾಡಲು) ಪ್ರಯೋಗಿಸಲಾಗುತ್ತದೆ. ಮಟ್ಟ ಉಳಿ, ಸೆಪ ಉಳಿ, ದೊಡ್ಡ ಉಳಿ, ಸಣ್ಣ ಉಳಿ, ಕೊಯ್ಯು ಉಳಿ, ಬಾಚಿ (ಇದನ್ನು ಮರವನ್ನು ಅಳತೆಗೆ ಅನುಸಾರವಾಗಿ ಕೆತ್ತಲಿಕ್ಕೆ ಹೊಡೆಯುವುದಕ್ಕೆ) ಬಳಸಲಾಗುತ್ತದೆ. ಇದೇ ರೀತಿ ಪಾಸ್ ೨, ರಮಾನಡ್ ಕಂಪಾಸ್ ೩. ಇನ್ ಸೈಡಂ ಕಂಪಾಸ್.

**ಬಣ್ಣಗಳ ತಯಾರಿಕೆ :** ಚನ್ನಪಟ್ಟಣದ ಚಿತ್ತಾರದ ಗೊಂಬೆಗಳಿಗೆ ತನ್ನದೇ ಆದ ಪಾರಂಪರಿಕ ಐತಿಹಾಸಿಕತೆಯನ್ನು ನೋಡಬಹುದಾಗಿದೆ. ಇಲ್ಲಿ ಮೊಟ್ಟಮೊದಲ ಬಾರಿಗೆ ಬಣ್ಣವು ಸುತ್ತಮುತ್ತ ಸಿಗುತ್ತಿದ್ದ ಗಿಡಗಳ ಹಣ್ಣುಗಳಿಂದ ಬಣ್ಣವನ್ನು ಉತ್ಪತ್ತಿ ಮಾಡುವುದನ್ನು ಕಂಡುಹಿಡಿದರು. ಅದರಲ್ಲಿ ದಾಸ ಜೆಟ್ಟಪ್ಪ, ಸಿ.ಎ. ಜೆಟ್ಟಪ್ಪ ಮತ್ತು ಪುಟ್ಟ ಜೆಟ್ಟಪ್ಪ ಎನ್ನುವರು ಬಣ್ಣದ ಬಳಕೆಯ ತಂತ್ರವನ್ನು ಪರಿಚಯಿಸಿದವರಲ್ಲಿ ಈ ಭಾಗದಲ್ಲಿ ಮೊದಗಲಿಗರೆನ್ನಬಹುದು.

ಚನ್ನಪಟ್ಟಣ ಕರಕುಶಲ ಕರ್ಮಿಗಳ ವಿವಿಧ ರೀತಿಯಲ್ಲಿ ಬಣ್ಣಗಳನ್ನು ತಯಾರಿಸಿಕೊಳ್ಳುತ್ತಿದ್ದರು. ಪ್ರಾರಂಭದಲ್ಲಿ ರಸಾಯನಿಕ ಬಣ್ಣಗಳನ್ನು ತಯಾರು ಮಾಡುವ ಮೂಲಕ ಆಟಿಕೆಯ ಸಾಮಾಗ್ರಿಗಳಿಗೆ ಲೇಪಿಸುತ್ತಿದ್ದರು. ಇದು ಹೆಚ್ಚು ಉಳಿಯಲಿಲ್ಲ. ಕಾರಣ ಇಲ್ಲಿ ಹೆಚ್ಚಿನ ಸಾಮಾಗ್ರಿಗಳು ಮಕ್ಕಳ ಆಟಿಕೆ, ಸಾಮಾನುಗಳಾಗಿರುತ್ತಿದ್ದವು. ಈ ಮಕ್ಕಳು ಆಟಿಕೆಯ ಸಾಮಾಗ್ರಿಗಳನ್ನು ಬಾಯಿಯಲ್ಲಿ ಇಟ್ಟುಕೊಳ್ಳುತ್ತಿದ್ದರಿಂದ ಬಾಯಿಯಲ್ಲಿ ಚಿಕ್ಕ ಗುಳ್ಳೆ ಮತ್ತು ಗಾಯಗಳಾಗುತ್ತಿದ್ದವು. ಆದ್ದರಿಂದ ಇದನ್ನು ಕಂಡು ಕೆಲ ಸಂಘ-ಸಂಸ್ಥೆಗಳು ಈ ರಾಸಾಯನಿಕ ಬಣ್ಣಗಳನ್ನು ನಿಷೇಧಿಸಿದರು. "ವೆಜಿಟೆಬಲ್ ಡೈಸ್" ಎನ್ನುವ ಬಣ್ಣದ ಬಳಕೆಯನ್ನು ಕೇಂದ್ರ ಸರ್ಕಾರದ ಮಾರ್ಗದರ್ಶನದ ಮೂಲಕ (ಸಹಯೋಗ)ದೊಂದಿಗೆ ಶಿಲ್ಪಟ್ರಸ್ಟ್" ಜೊತೆಗೂಡಿ ಈ ಬಣ್ಣದ ಬಳಕೆಯನ್ನು ಪ್ರಯೋಗಶಾಲೆಯಲ್ಲಿ ಇದನ್ನು ಪ್ರಯೋಗಿಸಿದರು. ಈ ಬಣ್ಣದ ಬಳಕೆಯಿಂದ ಯಾವುದೇ ರೀತಿಯ ತೊಂದರೆಯಾಗುವುದಿಲ್ಲ ಎಂದು ದೃಢಪಡಿಸಿದಾಗ ಅಂದಿನಿಂದ ಈವರೆಗೆ ತಯಾರಿಸುವ ವಸ್ತುಗಳಿಗೆ ಈ 'ವೆಜಿಟೇಬಲ್ ಡೈಸ್' ಎಂಬ ಬಣ್ಣದ ಬಳಕೆಯೇ ಹೆಚ್ಚು ಬಳಸುತ್ತಿದ್ದಾರೆ. ಇದು ಸಫಲವನ್ನು ತಂದೊಡ್ಡಿದೆ.

ಬಣ್ಣ ತಯಾರಿಸುವ ವಿಧಾನ ವೆಜಿಟೇಬಲ್ ಡೈಸ್ ಮಾರುಕಟ್ಟೆಯಲ್ಲಿ 'ಅರಗು' ಎಂಬ ವಸ್ತುವಿನ ರೂಪದಲ್ಲಿ ಸಿಗುತ್ತದೆ. ಇದು ಕೆ.ಜಿ ಒಂದಕ್ಕೆ ರೂ. ೨೫೦ ರಿಂದ ೪೫೦ ರೂ.ಗಳವರೆಗೆ ದೊರೆಯುತ್ತದೆ. ಇದು ಬಿಲ್ಲೆಯ ಆಕಾರವನ್ನು ಹೊಂದಿರುತ್ತದೆ.

ಅರಗಿನ ಉತ್ಪಾದನೆಗೆ ಅಷ್ಟು ಶ್ರಮದ ಅವಶ್ಯಕತೆ ಇರುವುದಿಲ್ಲ. ಅರಗಿನ ಬಳಕೆ ಹೆಚ್ಚಾಗಿ ಕೈಗಾರಿಕೆಯಲ್ಲಿ ತೊಡಗಿಸಿಕೊಳ್ಳುವಂತೆ ಮಾಡಬಹುದಾದ ಈ ಕಾಲದಲ್ಲಿ ಅರಗಿನ ಉತ್ಪಾದನೆಗೆ ವಿಶೇಶ ಗಮನವನ್ನು ನೀಡಬೇಕಾಗುತ್ತದೆ. ಗ್ರಾಮೋದ್ಯೋಗ ಸಂಘಗಳು ಇದರ ಮಹತ್ವವನ್ನು ಅರಿತಾಗ ಇದು ಕಠಿಣವಾದ ಕಾರ್ಯವೇನು ಅಲ್ಲ.

ಸಾವಿರಾರು ವರ್ಷಗಳಿಂದ ಮನುಷ್ಯ ಹಲವು ವಿವಿಧ ಪಾತ್ರೆಗಳಿಗೆ ಮೆರುಗು ನೀಡಲು ಬಳಸಿದ್ದು ಅರಗು. ಮಹಾಭಾರತದ ಕಥೆಯಲ್ಲಿ ಅರಗಿನ ಮನೆ ನಿರ್ಮಾಣದ ಪ್ರಸ್ತಾಪವಿದೆ. ಅಷ್ಟೊಂದು ದೊಡ್ಡ ಪ್ರಮಾಣದಲ್ಲಿ ಅರಗನ್ನು ಬಳಸಿ ಅರಮನೆಯನ್ನು ಕಟ್ಟಲಾಯಿತು ಎಂದರೆ ಅದೊಂದು ಅದ್ಭುತವೇ ಸರಿ. ಭಾರತದ ಅರಗು ಹಲವು ಮರಗಳಲ್ಲಿ 'ಲ್ಯಾಕ್' ಎಂಬ ಕೀಟದಿಂದ ಶೇಖರವಾಗುವ ಹಳದಿ ಬಣ್ಣದ ದ್ರವ ಅಥವಾ ಸ್ರಾವವಾಗಿದೆ. ಲ್ಯಾಕ್ಸಿ ಫೇರ್ ಲ್ಯಾಕ್ಕ ಇತರ ಶಲ್ಕ ಕೀಟಗಳಂತೆ ಒಂದು ಶಲ್ಕ ಕೀಟ ಪೂರ್ವ ಏಷ್ಯಾ ಮೂಲದ ಕೀಟವಾದ

ಲ್ಯಾಕ್ ಇತರ ಶಲ್ಕಕೀ ಕೀಟಗಳಂತೆ ದೇಹದ ಉಪಯೋಗಕ್ಕಾಗಿ ಅಥವಾ ದೇಹದಿಂದ ವಿಸರ್ಜಿಸಲು ಪದಾರ್ಥವೊಂದನ್ನು ಸ್ರವಿಸುತ್ತದೆ. ಈ ಸ್ರಾವ ರಾಳದಂತಹ ವಸ್ತುವಿನ ರೂಪವನ್ನು ತಾಳುತ್ತದೆ. ಹೆಣ್ಣು ಲ್ಯಾಕ್‌ಗಳು ಮರಗಳಿಗೆ ಅಂಟಿಕೊಂಡು ಗಂಡು ಶಲ್ಕಗಳಿಂದ ಗರ್ಭಧರಿಸಿ ಆಕಾರದಲ್ಲಿ ತೀವ್ರ ಬೆಳೆದು ಮುಂದಿನ ಸಂತತಿಗೆ ದಾರಿ ಮಾಡಿಕೊಡುತ್ತದೆ. ಭಾರತದಲ್ಲಿ ವರ್ಷಕ್ಕೆ ಎರಡು ಸಂತತಿ. ಸಾಮಾನ್ಯವಾಗಿ ಮರದ ಶಾಖೆಗಳಲ್ಲಿ ಇಂತಹ ನೂರಾರು ಹೆಣ್ಣು ಶಲ್ಕಗಳು ಕಂಡುಬರುತ್ತವೆ. ಇವು ಸ್ರವಿಸುವ ಸ್ರವಣ ಮರದ ತೊಗಟೆಯ ಮೇಲೆ ನಿರಂತರವಾಗಿ ಹೆಕ್ಕಳಿಕೆ ಉಂಟುಮಾಡುತ್ತವೆ. ಇದನ್ನು ಕೆರೆದು ತೆಗೆದು ಶುದ್ಧಿಕರಿಸಿ ಶೆಲ್ಯಾಕ್ ತಯಾರಿಸುವರು. ಶೆಲ್ಯಾಕ್ ಅರಗಿನ ವ್ಯವಹಾರದ ಹೆಸರು.

ಅರಗಿನ ಗುಣಮಟ್ಟ ಲ್ಯಾಕ್ ಕೀಟ ಆಶ್ರಯಿಸುವ ಆಹಾರ ಸಸ್ಯವನ್ನು ಅವಲಂಬಿಸಿ ಬದಲಾಗುತ್ತದೆ. ಬಾರತದಲ್ಲಿ ಮಧ್ಯ ಪ್ರಾಂತ್ಯಗಳು, ಬಂಗಾಳ, ಬಿಹಾರ, ಕರ್ನಾಟಕ, ಅಸ್ಸಾಂಗಳಲ್ಲೂ ಬರ್ಮಾದಲ್ಲೂ ಅರಗಿನ ಉತ್ಪಾದನೆ ಇದೆ. ಕೆಂದಾಳೆ, ಸಾಲ, ಜಾಲಿ ಮರ ಮೊದಲಾದವು ಲ್ಯಾಕ್ ಮರಗಳು. ಪಲಾಸ್, ಕುಸುಮ್, ಎಲಚಿ, ಬಾಬುಲ್, ಅರಹರ್, ಮಾಚ್ ಇವು ಪ್ರಮುಖ ಅತಿಥೇಯ ಮರಗಳು.

೧೯೫೦ನೇ ಇಸವಿಯವರೆಗೂ ಭಾರತ ವಿಶ್ವದಲ್ಲಿ ಉತ್ಪಾದನೆಯಾಗುವ ಅರಗಿನ ಶೇ. ೮೫ ಭಾಗವನ್ನು ಉತ್ಪಾದಿಸುತ್ತಿತ್ತು. ೧೯೫೦ರ ನಂತರ ಥೈಲ್ಯಾಂಡ್ ಅರಗಿನ ಉತ್ಪಾದನೆ ಹೆಚ್ಚಿಸಿತು. ಇಂದು ಭಾರತದಲ್ಲಿ ಅರಗಿನ ಉತ್ಪಾದನೆ ಹಿಂದಿನಷ್ಟಿಲ್ಲ. ಅರಗಿನ ಗೂಡಿನಿಂದ ಮರಿಹುಳುಗಳು ಹೊರಬಂದ ಮೇಲೆ ಹೆಣ್ಣು ಹುಳುಗಳು ಸೊರಗಿ ಸತ್ತುಹೋಗುತ್ತವೆ. ಹುಳುಗಳಿಲ್ಲದ ಇಂತಹ ಖಾಲಿ ಅರಗಿನ ಕಡ್ಡಿಗಳಿಗೆ 'ಫುಂಕಿ' ಎಂದು ಹೆಸರು. ಈ ಕಡ್ಡಿ ಅರಗನ್ನು ಉಜ್ಜಿ ನೀರಿನಲ್ಲಿ ತೊಳೆದು ಒಣಗಿಸಿ ಜರಡಿ ಹಿಡಿದು ಬೀಜದ ಅರಗನ್ನು ಉತ್ಪಾದಿಸುತ್ತಾರೆ. ಈ ಬೀಜ ಅರಗನ್ನು ನೇರವಾಗಿ ಕಟ್ಟಡಗಳ ನೆಲದ ಮೆರುಗು ತಯಾರಿಸಲು ಉಪಯೋಗಿಸುತ್ತಾರೆ. ಬೀಜ ಅರಗಿನಿಂದ ಚಿಪ್ಪಿನ ಅರಗು, ಗುಂಡಿ ಅರಗು, ಗಾರ್ನೆಟ್ ಅರಗು ಮತ್ತು ಬಿಳಿ ಅರಗನ್ನು ತಯಾರಿಸುತ್ತಾರೆ.

ಮೊದಲಿಗೆ ಅರಗನ್ನು ರೇಷ್ಮೆ, ಉಣ್ಣೆ ಮೊದಲಾದವುಗಳಿಗೆ ವರ್ಣದ್ರವ್ಯವನ್ನಾಗಿ ಉಪಯೋಗಿಸುತ್ತಿದ್ದರು. ಅರಗು ಸಾಮಾನ್ಯವಾಗಿ ಗಾಢರಕ್ತ ವರ್ಣದ ಇಲ್ಲವೇ ಕಪ್ಪಾಗಿರುವ ಪದಾರ್ಥ. ಇದಕ್ಕೆ ಇತರ ಬಣ್ಣಗಳನ್ನು ಬೆರೆಸಿ ಉಪಯೋಗಿಸುವುದುಂಟು. ಅರಗಿನ ಮೆರುಗಿನ ಹೊದಿಕೆ ನೀಡಿ ಅದರ ಮೇಲೆ ಬಣ್ಣದಿಂದ ಚಿತ್ರಗಳನ್ನು ಮೂಡಿಸಬಹುದು. ಕೆಲವು ವರ್ಷಗಳ ಹಿಂದೆ ಸುಮಾರು ಶೇ. ೫೦ ಭಾಗ ಅರಗನ್ನು ಗ್ರಾಮಾಫೋನ್ ರಿಕಾರ್ಡ್‌ಗಳ ತಯಾರಿಕೆಗೆ ಬಳಸಲಾಗುತ್ತಿತು. ಇಂದು ತುಂಬಾ ಕಡಿಮೆ.

ಅರಗು ಬಹುಮುಖಿ ಸಾಮರ್ಥ್ಯದ ಅಪೂರ್ವ ಗುಣಗಳಿಂದ ಕೂಡಿದ ಸ್ವಾಭಾವಿಕ ರಾಳ. ಪ್ಲಾಸ್ಟಿಕ್, ವಿದ್ಯುತ್ ಸಾಮಗ್ರಿಗಳು, ಅಂಟು ಪದಾರ್ಥಗಳು, ಚರ್ಮಗಳಿಗೆ ವಾರ್ನಿಷ್ ಬಣ್ಣ ಮುಂತಾದವುಗಳಿಗೆ ಉಪಯೋಗಿಸುತ್ತಾರೆ. ಇದನ್ನು ಸುಡುಮದ್ದು, ಮಿಠಾಯಿ, ಬೆಸೆಯುವ ಮೇಣ, ಚರ್ಮದ ಹೊದಿಕೆಯಾಗಿ

ಫೆಲ್ಟ್, ಹ್ಯಾಟ್ ಮತ್ತು ಹುಲ್ಲಿನ ಟೋಪಿಗೆ ಮೊದಲಾದವುಗಳ ತಯಾರಿಕೆಯಲ್ಲಿ ಉಪಯೋಗಿಸುತ್ತಾರೆ. ಉಗುರಿನ ಪಾಲಿಷ್, ಹಲ್ಲಿನ ತಟ್ಟೆ, ಬಳೆ ಆಭರಣಗಳಲ್ಲಿ ತುಂಬುವ ಸಾಧನವಾಗಿ ಮತ್ತು ಹೊಳಪಿನ ಕಾಗದದ ತಯಾರಿಕೆಯಲ್ಲೂ ಸಹ ಉಪಯೋಗಿಸುತ್ತಾರೆ. ಭಾಗಗಳ ಮುಚ್ಚಲ್ಪಟ್ಟ ಪೆಟ್ಟಿಗೆಗಳ ಹೊದಿಕೆ ಮೇಣವಾಗಿ ಅರಗು ಬಹು ಉಪಯೋಗಿ. ವಿದ್ಯುತ್ ಉದ್ದಿಮೆಯಲ್ಲಿ ವಾರ್ನಿಷ್‌ಗಳ ವಿವಿಧ ಬಗೆಯ ಇನ್ಸುಲೇಷನ್ ವಸ್ತು, ಅಭ್ರಕದಿಂದ ತಯಾರಿಸುವ ಇನ್‌ಸುಲೇಷನ್ ವಸ್ತುಗಳು ಮತ್ತು ಇನ್ನೂ ಹಲವಾರು ವಸ್ತುಗಳ ತಯಾರಿಕೆಯಲ್ಲಿ ಉಪಯೋಗಿಸುತ್ತಾರೆ.

ಇಂದು ಕೈಗಾರಿಕಾ ಅರಗು ಜನಪ್ರಿಯ. ಕಾರಣ ಇದು ಸಹಜ ಅರಗಿಗಿಂತ ಹೆಚ್ಚು ಬಾಳಿಕೆ ನೀಡುತ್ತದೆ. ಮತ್ತೆ ಕೆಲವು ರಾಳಗಳನ್ನು ಬೆರೆಸಿದಾಗ ಬಾಳಿಕೆ, ಅಂಟುಗುಣ, ನೀರು ಎದುರಿಸುವ ಗುಣ ಬರುತ್ತದೆ. ಶೈತ್ಯಾಕಾರಕ ಯಂತ್ರಗಳಲ್ಲಿ ಚರ್ಮ ಹಾಗೂ ವಸ್ತ್ರೋದ್ಯಮಗಳಲ್ಲಿ ಮೆರುಗು ಹೊದಿಕೆಯಾಗಿ ಅರಗು ಉಪಯುಕ್ತ. ಅರಗು ಲೇಪನದಿಂದ ಸೊಲೊಫೇನ್ ಕಾಗದ ರಟ್ಟುಗಳು ಮಿನುಗುವಂತೆ ಮಾಡಬಹುದು. ಉಷ್ಣತೆಯ ವ್ಯತ್ಯಾಸಗಳು ಕಂಡುಬಂದರೂ ಅರಗು ತನ್ನ ಬಣ್ಣವನ್ನು ಕಳೆದುಕೊಳ್ಳುವುದಿಲ್ಲ. ಗ್ರಾಮ ಕೈಗಾರಿಕೆಯಾಗಿ ಗೃಹ ಕೈಗಾರಿಕೆಯಾಗಿ ಬಿಡುವಿನ ಉದ್ಯೋಗವಾಗಿ ಅರಗಿನ ಉತ್ಪಾದನೆ ಕೃತಕ ಅರಗು ತಯಾರಿಕೆ ಇವೆಲ್ಲಾ ನೆರವಾಗಿರುತ್ತವೆ.

ಮೊದಲು ಒಂದು ಕಬ್ಬಿಣದ ಬಾಟಲಿಯಲ್ಲಿ ಇದ್ದಲಿನಿಂದ ಕೆಂಡವನ್ನು ಮಾಡಿಕೊಳ್ಳಬೇಕು. ನಂತರ ಎರಡು ಕೋಲುಗಳನ್ನು ತೆಗೆದುಕೊಂಡು ಈ ಅರಗಳನ್ನು ಒಂದು ಬಿಲ್ಲೆಯನ್ನು ಕೋಲಿನ ಸಹಾಯದಿಂದ ಕೆಂಡಕ್ಕೆ ಹಿಡಿದಾಗ ಅದು ಕರಗಿ ಅಟ್ಟಿನ ರೂಪದಲ್ಲಿ ಬರುತ್ತದೆ. ಇದೇ ರೀತಿಯಾಗಿ ಕೆಲಸಕ್ಕೆ ಬೇಕಾಗುವಷ್ಟು ಬಣ್ಣವನ್ನು ತಯಾರಿಸಿಕೊಳ್ಳಬೇಕಾಗುತ್ತದೆ. ಏಕೆಂದರೆ ಇದರ ಉತ್ತಮ ಗುಣಮಟ್ಟದ ಅವಧಿ ೧ ತಿಂಗಳು ಕಾಲ ಮಾತ್ರವಾಗಿರುತ್ತದೆ. ಆದ್ದರಿಂದ ಇದನ್ನು ಸ್ವಲ್ಪ ಸ್ವಲ್ಪ ಪ್ರಮಾಣದಲ್ಲಿ ತಯಾರಿಸಿಕೊಳ್ಳುತ್ತಾರೆ. ಅರಗನ್ನು ಬಂಗಾರದ ಬಣ್ಣ ಬರುವವರೆಗೆ ಕಾಯಿಸಿಕೊಳ್ಳಬೇಕು. ನಂತರ ಇದಕ್ಕೆ 'ವೆಜಿಟೇಬಲ್ ಡೈಸ್' ಎಂಬ ಬಣ್ಣವು ಕಾರ್ಮಿಕರಿಗೆ ಬೇಕಾದ ಬಣ್ಣಗಳಾದವು ಉದಾಹರಣೆ ನೀಲಿ, ಹಳದಿ, ಕೆಂಪು, ನಸುಕೆಂಪು, ನೇರಳೆ, ಬೂದು, ಕಪ್ಪು ಇನ್ನೂ ಹಲವು ರೀತಿಯ ಬಣ್ಣಗಳನ್ನು ಇದಕ್ಕೆ ಬೇಕಾದ ಬಣ್ಣದ ಹದ ಬರುವವರೆಗೂ ಇದನ್ನು ಕಾಯಿಸಿದ ಅರಗಿಗೆ ಸೇರಿಸಬಹುದು. ತಾವು ಉಪಯೋಗಿಸುವ ಬಣ್ಣದ ರೂಪವು ಬಂದನಂತರ ಇದು ತಣ್ಣಗಾಗಲು ಸ್ವಲ್ಪ ದೊಡ್ಡದಾದ ತಟ್ಟೆಯಲ್ಲಿ, ನೀರಿನ ಸಹಾಯದಿಂದ ಸ್ವಲ್ಪಮಟ್ಟಿಗೆ ತಂಪಾಗುವ ರೀತಿಯಲ್ಲಿ ಇದರಲ್ಲಿ ಮುಳುಗಿಸುತ್ತಾರೆ. ಇದು ಬಿಸಿ ಇರುವಾಗಲೆ ಉದ್ದವಾದ ಪಟ್ಟಿಯಾಕಾರದಲ್ಲಿ ಹಿಗ್ಗಿಸಿ ಇಡುತ್ತಾರೆ. ಇದೇ ರೀತಿಯಾಗಿ ನಾನಾ ರೀತಿಯ ಬಣ್ಣಗಳನ್ನು ಬೆರೆಸಿಕೊಂಡು ತಮಗೆ ಬೇಕಾದ ಬಣ್ಣಗಳನ್ನು ತಯಾರಿಸಿಟ್ಟುಕೊಂಡು ಗೊಂಬೆಗಳಿಗೆ ಬೇಕಾದ ರೀತಿಯಲ್ಲಿ ಲೇಪನವನ್ನು ಮಾಡಿ ಸುಂದರವಾಗಿಸುತ್ತಾರೆ.

## ಗೊಂಬೆ ತಯಾರಿಕಾ ವಿಧಾನಗಳು

ವಿದ್ಯುತ್ ಚಾಲಿತವಾದ ಯಂತ್ರಕ್ಕೆ ಅಳತೆಗೆ ಅನುಸಾರವಾದ ಮರದ ತುಂಡನ್ನು ವಸ್ತು ವಿಷಯಗಳ ಆಕಾರಕ್ಕೆ ತಕ್ಕಂತೆ ವಿದ್ಯುತ್ ಚಾಲಿತ ಯಂತ್ರಕ್ಕೆ ಅಳವಡಿಸಿಕೊಂಡು ಬೇಕಾದ ಆಕಾರಕ್ಕೆ ತಕ್ಕಂತೆ ಮರದ ತುಂಡನ್ನು ಸಿದ್ಧಪಡಿಸಿಕೊಳ್ಳುತ್ತಾರೆ. ನಂತರ ಕೆಲವು ಉಪಕರಣಗಳಾದ ಮದ್ದುಳಿ, ಉಗುರುಳಿ ಇನ್ನೂ ಇತ್ಯಾದಿ ಉಪಕರಣಗಳನ್ನು ಉಪಯೋಗಿಸಿಕೊಂಡು ಯಂತ್ರಕ್ಕೆ ಅಳವಡಿಸಿ ಮರದ ತುಂಡನ್ನು ಬೇರ್ಪಡಿಸಿಕೊಂಡು ಅಲಂಕಾರವಾಗಿ ರೂಪಿಸುತ್ತಾರೆ. ನಂತರ ಬೇಕಾದ ಗೊಂಬೆಗಳ ಆಕಾರ ತರುತ್ತಾರೆ. ತದನಂತರ ಆ ವಸ್ತುಗಳು ನುಣುಪಾಗಲು ಉಪ್ಪಿನ ಕಾಗದದಿಂದ ಅವುಗಳನ್ನು ಮೇಲ್ಮೆಯನ್ನು ವಿದ್ಯುತ್ ಯಂತ್ರದ ಸಹಾಯದಿಂದ ಅದನ್ನು ತಿಕ್ಕಿ ಅದು ನುಣುಪಾಗುವಂತೆ ಮಾಡುತ್ತಾರೆ. ನಂತರ "ವೆಜಿಟೇಬಲ್ ಡೈಸ್"ನಿಂದ ತಯಾರಾದ ಬಣ್ಣಗಳನ್ನು ಗೊಂಬೆಗಳಿಗೆ ವಿದ್ಯುತ್ ಚಾಲಿತ ಯಂತ್ರದ ಸಹಾಯದಿಂದ ನೇರವಾಗಿ ಲೇಪಿಸುವುದು, ನಂತರ ತಾಳೆಗರಿಯಿಂದ ಇವುಗಳ ಮೇಲ್ಮೆಯನ್ನು ಹೊಳೆಯುವಂತೆ ಉಜ್ಜುವುದು. ಈ ಗರಿಯಿಂದ ಉಜ್ಜಿದ ನಂತರ ಸಾಮಾನುಗಳು ಹೊರ ಮೇಲ್ಮೆಯ ಹೆಚ್ಚಿನ ರೀತಿಯಲ್ಲಿ ಆಕರ್ಷಣೆಯಾಗುವ ರೀತಿಯಲ್ಲಿ ಬೊಂಬೆಗಳು ಅಥವಾ ಕೆಲವು ಸಾಮಾಗ್ರಿಗಳು ಮಿಂಚುತ್ತವೆ. ಇದಲ್ಲದೆ ಇನ್ನೂ ಕೆಲವು ಅಗತ್ಯವಿರುವಂತಹ ಹೆಚ್ಚಿನ ಬಣ್ಣಗಳ ನಕ್ಷೆಯನ್ನು ಲೇಪಿಸಬೇಕಾದಲ್ಲಿ ಪೋಸ್ಟರ್ ಕಲರ್ ಬಣ್ಣವನ್ನು ಕುಂಚಗಳ ಸಹಾಯದಿಂದ ಅವುಗಳ ಮೇಲೆ ವಿವಿಧ ರೀತಿಯ ನಕ್ಷಾ ಚಿತ್ರಣಗಳನ್ನು ಮಾಡುವುದುಂಟು, ಇದಲ್ಲದೆ ಇನ್ನೂ ಕೆಲವು ಸಂದರ್ಭದಲ್ಲಿ ಮಾರ್ಕ್ ಲೇಖನಿ ಸಹಾಯದಿಂದಲೂ ನಕ್ಷಾ ಚಿತ್ರಗಳನ್ನು ಬರೆದು ಪೂರ್ಣಗೊಳಿಸಲಾಗುತ್ತದೆ. ಹೀಗೆ ಪಾರಂಪರಿಕ ವಿಧಾನಗಳಿಂದ ವಸ್ತುಗಳನ್ನು ತಯಾರಿಸುವ ಚನ್ನಪಟ್ಟಣದ ಚಿತ್ತಾರದ ಗೊಂಬೆಗಳು ಕಲಾತ್ಮಕವಾಗಿರುವುದು ಸ್ವಾಭಾವಿಕವಾಗಿದೆ. ಈ ಗೊಂಬೆಗಳ ತಯಾರಿಕೆಯಲ್ಲಿ ಹಲವು ರೀತಿಯ ವಸ್ತುವೈವಿಧ್ಯತೆ ಕಂಡುಬರುತ್ತಿದ್ದು ಅದನ್ನು ಮುಂದಿನ ಅಧ್ಯಾಯದಲ್ಲಿ ಸ್ಥೂಲವಾಗಿ ಗಮನಿಸಲಾಗಿದೆ.

## ಅಧ್ಯಾಯ ೪

# ಚನ್ನಪಟ್ಟಣದ ಚಿತ್ತಾರದ ಗೊಂಬೆಗಳ ವಸ್ತು ವೈವಿಧ್ಯತೆ

---

**ಮಾ**ನವನು ಅಲೆಮಾರಿಯಾಗಿದ್ದು, ತನ್ನ ಹಸಿವನ್ನು ನೀಗಿಸಿಕೊಳ್ಳಲು ಬೇಟೆ ವೃತ್ತಿಯ ಮೂಲಕ ಜೀವನ ನಡೆಸುತ್ತಿದ್ದನು. ಹಾಗೂ ಕಾಡು ಪ್ರಾಣಿಗಳನ್ನು ಕೊಂದು ಪ್ರಾಣಿಗಳ ಚರ್ಮದಿಂದ ಕವಚಗಳನ್ನು ತಯಾರಿಸುತ್ತಿದ್ದನು. ಮುಂದೆ ಅಭಿರುಚಿಗಳು ಬೇರೆಯಾದಂತೆ ಮಾನವನ ಸೌಂದರ್ಯ ದೃಷ್ಟಿ ಮತ್ತು ಕಲಾ ಜಾಣ್ಮೆಯನ್ನು ಗುರುತಿಸಬಹುದಾಗಿದೆ. ಓಗೆ ಬದುಕಿನ ಮುನ್ನುಡಿಗೆ ಉಪಯುಕ್ತವಾಗುವ ಸಲಕರಣೆಗಳೇ ಮುಂದೆ ಕರಕುಶಲ ಕಲೆಗಳಿಗೆ ದಾರಿ ಮಾಡಿಕೊಟ್ಟಿವೆ. ಅಂದಿನಿಂದ ಇಂದಿನವರೆಗೂ ಕುಶಲಕರ್ಮಿಗಳು ಹಾಗೂ ಅನೇಕ ಕಲಾವಿದರು ವಿವಿಧ ವಸ್ತುಗಳಲ್ಲಿ ನವೀನ ರೀತಿಯ ವಿನ್ಯಾಸಗಳನ್ನು ಮೂಡಿಸಲು ತಮಗೆ ಬೇಕಾಗುವಂತಹ ಪರಿಕರಗಳನ್ನು ತಯಾರಿಸಿಕೊಳ್ಳುತ್ತಾ ಬಂದಿರುವುದು ನೋಡಬಹುದು.[೧]

ಇತ್ತೀಚಿನ ದಿನಗಳಲ್ಲಿ ವಿಜ್ಞಾನ ಬೆಳೆದಂತೆ ಮನುಷ್ಯನ ಜ್ಞಾನ ಶಾಖೆಗಳು ಹೆಚ್ಚಿವೆ. ಆದರೆ ವಿಜ್ಞಾನ ಷ್ಟೇ ಬೆಳೆದರೂ ಅದು ಮನುಷ್ಯನ ಬಗ್ಗೆ ವಿವರಣೆಯನ್ನು ಕೊಟ್ಟಿದೆಯೇ ಹೊರತು ಮನುಷ್ಯ ಅದರ ಕೈಗೆ ಸಿಕ್ಕಿಲ್ಲ. ತಂತ್ರಜ್ಞಾನದ ಬೆಳವಣಿಗೆ ಹಾಗೂ ಬಳಕೆಯಿಂದ ಕೈಗಾರಿಕೆಗಳು ಬೆಳೆದು ಅಭಿವೃದ್ಧಿ ಹಂತದಲ್ಲಿ

---

[illegible]. ಡಾ. ಶಿವಪ್ರಕಾಶ ಕುಕ್ಕಣ್ಣವರ, ಕರ್ನಾಟಕದ ರಥಶಿಲ್ಪಕಲೆ, ಪು.೩೬

ಮುನ್ನಡೆಯುತ್ತಿವೆ.[3] ವಿದ್ಯುತ್ ಚಾಲಿತ ಯಂತ್ರಗಳಿಂದ ಕಾಷ್ಠ ಮಾಧ್ಯಮ, ಶಿಲೆಯ ಮಾಧ್ಯಮ, ಲೋಹ ಮಾಧ್ಯಮಗಳಲ್ಲಿ ಸೂಕ್ಷ್ಮ ಕುಸುರಿ ಕೆತ್ತನೆಯ ಕೆಲಸವನ್ನು ನಾವು ಇಂದಿಗೂ ಕರ್ನಾಟಕದ ವಿವಿಧ ಪ್ರದೇಶಗಳಲ್ಲಿ ಕಾಣುತ್ತೇವೆ. ಪ್ರಮುಖವಾಗಿ ಚನ್ನಪಟ್ಟಣ ಕಲೆಯ ಪರಿಕರ ಕುರಿತು ಹೇಳುವುದಾದರೆ ಇಲ್ಲಿ ಹೆಚ್ಚಾಗಿ ಹಾಲೆಮರ, ಅರಗು, ಬಣ್ಣಗಳು, ಉಳಿಗಳು ಇನ್ನೂ ಅನೇಕ ರೀತಿಯಲ್ಲಿ ಉಪಯೋಗಿಸಲ್ಪಡುವ ಹಳೆಯ ಪರಿಕರಗಳು ಕಂಡುಬರುತ್ತವೆ.

ಸಾಮಾನ್ಯವಾಗಿ ಆಟಿಕೆ ಸಾಮಾನುಗಳು ಮುಂತಾದವುಗಳನ್ನು ನಿರ್ಮಿಸುವಾಗ ಈ ಎಲ್ಲಾ ಪರಿಕರಗಳು ಚನ್ನಪಟ್ಟಣ ಕಲೆಗೆ ಮಾತ್ರ ಸಿಮೀತ ಮಾಡಿಕೊಂಡು ನಿರ್ಮಾಣವಾದ ಕಲಾಕೃತಿಗಳಾಗಿವೆ. ಕುಶಲಕಲೆ ಸೂಕ್ತ ಕಚ್ಚಾ ಸಾಮಾಗ್ರಿಗಳಿಗೆ ಉಪಯುಕ್ತ ಹಾಗೂ ಆಕರ್ಷಕ ರೂಪವನ್ನು ಕೊಡುವುದೇ ಆಗಿದೆ. ಇದು ಯಾವುದೋ ವಸ್ತುವೊಂದನ್ನು ನಿರ್ಮಿಸಲು ಎಂಥದೋ ಒಂದು ಮೂಲ ಸಾಮಗ್ರಿಯನ್ನು ಬಳಸಿಕೊಳ್ಳುವ ನೈಪುಣ್ಯವಷ್ಟೇ ಅಲ್ಲ ಅಥವಾ ಆ ವಸ್ತುವನ್ನು ತಯಾರಿಸುವಲ್ಲಿನ ಸಾಧನೋಪಕರಣಗಳ ಬಳಕೆಯಷ್ಟೇ ಅಲ್ಲ. ಇವು ಮಾನವನ ಬುದ್ಧಿ, ಭಾವ ಮತ್ತು ದೇಹಗಳ ಸಹಸ್ಪಂದನದ ಪರಿಣಾಮವಾಗಿ ಬೆಳೆದು ಬಂದಿವೆ. ಇಂತಹ ಸ್ಪಂದನದ ಹಿಂದೆ ಜೀವನಾಗತ್ಯವಾದ ಒತ್ತಡ ಇರುತ್ತದೆಂಬುದನ್ನು ಮರೆಯಲಾಗದು. ಒಂದರ್ಥದಲ್ಲಿ ಕರಕುಶಲ ಕಲೆಗಳ ಉಗಮ ಅಗತ್ಯಗಳ ಅನ್ವೇಷಣೆಯಾದರೆ ಅವುಗಳ ವಿಕಾಸವು ಮಾನವನ ಬುದ್ಧಿ, ಸೃಜನಶೀಲತೆಗಳು ಪರಿಸರ ಪರಿಕರಗಳನ್ನು ಬಳಸಿಕೊಂಡು ಬೆಳೆದ ಬಂದ ರೀತಿ ಎನ್ನಬಹುದು.

ಕುಶಲ ಕಲೆಗಳ ವಿಕಾಸಕ್ಕೂ ಮಾನವನ ಬುದ್ಧಿ ಭಾವಗಳ ಬೆಳವಣಿಗೆಗೂ ನೇರ ಸಂಬಂಧವಿದೆ. ಒಬ್ಬಂಟಿಯಾಗಿ ಜೀವಿಸುತ್ತಿದ್ದ ಮಾನವನು ಸಂಘ ಜೀವಿ ನಂತರ, ಮೊದಲು ಕುಟುಂಬ ಜೀವಿಯಾಗಿದ್ದು ನಂತರ ಗುಂಪು ಜೀವಿಯಾದ. ಗುಂಪು ಜೀವಿಯಾಗಿದ್ದವನು ಗ್ರಾಮ ಜೀವಿಯಾದ, ಗ್ರಾಮ ಜೀವಿಯಾಗಿದ್ದವನು ಪಟ್ಟಣ, ನಗರ ಜೀವಿಯಾದನು. ಈ ಎಲ್ಲಾ ಹಂತಗಳಲ್ಲಿಯೂ ಭಾವ ಜೀವಿಯಾಗಿ ಬುದ್ಧಿ ಜೀವಿಯಾಗಿ ಹಲವಾರು ಸಂಬಂಧ, ಸಂಪರ್ಕಗಳನ್ನು ವಿಸ್ತರಿಸಿಕೊಂಡು ತನ್ನ ಬದುಕುವಿಕೆ, ಇರುವಿಕೆಗಳಲ್ಲಿ ಪರಿವರ್ತನೆಗಳನ್ನು ಕಾಣುತ್ತಾ ಇಂದಿನವರೆಗೂ ಬೆಳೆಯುತ್ತಲೇ ಬಂದಿದ್ದಾನೆ. ಜೊತೆಗೆ ತನ್ನ ಸುತ್ತಲಿನ ಪರಿಸ್ಥಿತಿ ಅನುಗುಣವಾಗಿ ಪರಿಸರ ಪರಿಕರಗಳನ್ನು ತನಗಾಗಿ, ತನ್ನವರಿಗಾಗಿ ಬೆಳಸಿಕೊಳ್ಳುತ್ತಲೇ ಬಂದಿದ್ದಾನೆ. ಮಾನವ ಒಂದು ಹಂತದಲ್ಲಿ ಅಲೆಮಾರಿಯಾಗಿದ್ದವನು ಒಂದುಕಡೆ ನೆಲೆಯೂರಿ ಸುಖ, ಸೌಕರ್ಯಗಳನ್ನೊಳಗೊಂಡು ಜೀವಿಸತೊಡಗಿದ ಪ್ರತಿಯೊಂದು ಸಂದರ್ಭ, ಸನ್ನಿವೇಶಗಳು ಅವನಿಂದ ರೂಪಗೊಳ್ಳುತ್ತಾ ಬಂದ ಕಲೆ, ಕುಶಲಕಲೆಗಳ ಮೇಲೆ ದಟ್ಟವಾದ ಪರಿಣಾಮ ಪ್ರಭಾವ ಬೀರಿವೆ. ಕುಶಲ ಕಲೆಗಳು ಕೂಡ ಮಾನವನ ಬೆಳವಣಿಗೆಯೊಂದಿಗೆ ವಿಕಾಸಗೊಳ್ಳುತ್ತಾ ಬಂದಿವೆ.

---

೩. ಶಂಕರಪಾಟೀಲ, ಚಿತ್ರಕಲಾ ಚಿಂತನೆ, ಪು.೬೩

ಬಹುಶಃ ಮಾನವನ ಸಾಂಘಿಕ ಜೀವನದ ಪ್ರಾರಂಭಿಕ ದಿಸೆಯಲ್ಲಿಯೇ ಕುಶಲಗಾರ ಅಸ್ತಿತ್ವಕ್ಕೆ ಬಂದಿರ್ಲ ಬಹುದು. ಅದಕ್ಕೂ ಮೊದಲು ಒಬ್ಬಂಟಿ, ಅನಂತರ ಕುಟುಂಬ, ಗುಂಪು ಜೀವಿಯ ಹಂತದಲ್ಲಿ ತಮತಮಗೆ ಬೇಕಾದ ವಸ್ತು, ಪಾತ್ರೆ, ಸಾಧನಗಳನ್ನು ಅಗತ್ಯಗಳಿಗೆ ಅನುಗುಣವಾಗಿ ತಾನೇ ತಯಾರಿಸಿ ಕೊಳ್ಳುತ್ತಿದ್ದಿರಬೇಕು. ಬಹಳವೆಂದರೆ ಆಗ ಪರಸ್ಪರರು ಸಹಕರಿಸುತ್ತಿದ್ದಿರಬಹುದು. ಇಂತಹ ಸಂದರ್ಭದಲ್ಲಿ ಒಬ್ಬನು ಇನ್ನೊಬ್ಬನಿಗಿಂತ ಅಥವಾ ಇನ್ನೂಳಿದವರಿಗಿಂತ ಆ ಕೆಲಸದಲ್ಲಿ ಕುಶಲ ಎಂದು ಕಂಡುಬಂದಾಗ ಅಥವಾ ಕೆಲಸವನ್ನು ಅವನಿಗೆ ವಹಿಸಿರುವುದು ಸಹಜವಾಗಿದೆ. ಇಂತಹ ಸಂದರ್ಭದಲ್ಲೇ ಅವನ ಗುಂಪಿನ ಅಥವಾ ಗ್ರಾಮದ ಇತರರಿಗಿಂತ ಹೆಚ್ಚು ಕುಶಲತೆ ಸಾಧಿಸಲು ಸಾಧ್ಯವಾಗಿಸಿರಬಹುದು. ಹೀಗೆ ತಾನು ಸಾಧಿಸಿದ ಕುಶಲತೆಯಿಂದ ಸಾಮೂಹಿಕ ಜೀವನದ ಅಗತ್ಯತೆಗಳನ್ನು ಪೂರೈಸಿಕೊಳ್ಳುತ್ತಾ ಬಂದುದೇ ಕುಶಲಕಲೆಗಳು ಹಾಗೂ ಕುಶಲ ಕಲೆಗಾರರು ಅಸ್ತಿತ್ವಕ್ಕೆ ಬರಲು ಕಾರಣವಾಗಿರಬೇಕು.



ಕುಶಲಕಲೆಗಳೆಲ್ಲವೂ ಏಕಕಾಲಕ್ಕೆ ಅಸ್ತಿತ್ವ ಪಡೆದಿರಲಾರವು. ಮಾನವನ ಬೆಳವಣಿಗೆಯಲ್ಲಿ ಮೊದಲು ಬೇಟೆ, ಅನಂತರ ಬೇಸಾಯ ಪ್ರಧಾನವಾಗಿದೆ. ಅದಕ್ಕಾಗಿ ಅವನು ತನ್ನ ಸುತ್ತಲೂ ದೊರಕುತ್ತಿದ್ದ ಸಾಮಗ್ರಿಯ ಪರಿಮಿತಿಯಲ್ಲಿ ಕೆಲವು ಆಯುಧ, ಪಾತ್ರೆ, ಹೊದಿಕೆ, ವ್ಯವಸಾಯದ ಸಾಧನ ಮುಂತಾದವುಗಳನ್ನು ರಚನಾ ಚಟುವಟಿಕೆಗಳಲ್ಲಿ ತೊಡಗಿರಬಹುದು. ಮುಂದೆ ಅವೇ ಕುಶಲಕಲೆಗಳಾಗಿ ಮಾರ್ಪಟ್ಟಿವೆ ಎನ್ನಿಸುತ್ತದೆ.

ಚನ್ನಪಟ್ಟಣ ಬಣ್ಣದ ಬೊಂಬೆಗಳ ತಯಾರಿಕೆ. ನಮ್ಮ ಭಾರತದಲ್ಲಿ ಮಾತ್ರವಲ್ಲದೆ ದೇಶ ವಿದೇಶ ಗಳಲ್ಲಿಯೂ ಸಹ ಸಾಕಷ್ಟು ಜನಪ್ರಿಯತೆಯನ್ನು ಪಡೆದಿವೆ. ಚನ್ನಪಟ್ಟಣದ ಚಿತ್ತಾರ ಗೊಂಬೆಗಳ ನೈಜತೆಯಿಂದ ಅನೇಕ ವರ್ಷಗಳಿಂದ ಹೆಸರು ಪಡೆದಿವೆ. ಅಲ್ಲದೆ ಚನ್ನಪಟ್ಟಣದ ಚಿತ್ತಾರ ಗೊಂಬೆಗಳ ತಯಾರಿಕೆ ಮತ್ತು ಬಣ್ಣಗಳ ಬಳಕೆಯನ್ನು ಸ್ಥೂಲವಾಗಿ ಗಮನಿಸಬಹುದು. ಇಲ್ಲಿ ಗೊಂಬೆಯ ತಯಾರಿಕೆಯಲ್ಲಿ ಬಳಸುವಂತಹ ಅನೇಕ ರೀತಿಯ ವಸ್ತು ವಿಷಯಗಳ ಕುರಿತು ಹೇಳಲಾಗಿದೆ. ಇಲ್ಲಿ ಹೆಚ್ಚು ಆಟಿಕೆ ಸಾಮಾನುಗಳು, ಗೊಂಬೆಗಳು, ಶಾಲಾ ಪಾಠದಲ್ಲಿ ಉಪಯೋಗಿಸುವಂತಹ ಕಲಿಕೆಯ ಸಾಮಾನುಗಳು, ಗೃಹೋಪಯೋಗಕ್ಕೆ ಬಳಸುವಂತಹ ಕೆಲವು ವಸ್ತುಗಳು, ಸೌಂದರ್ಯ ದೃಷ್ಟಿಯಿಂದ ಮನೆ ಅಲಂಕಾರಿಕ ವಸ್ತುಗಳಾದ ಕುದುರೆಗಳು, ಕಾರುಗಳು, ರೈಲುಗಳು, ಸ್ಕೂಟರ್‌ಗಳು ಅಲ್ಲದೆ ರೈತರು ಬಳಸುವ ಕೂಡುಗೋಲು ಮತ್ತು ಹೊಲಗದ್ದೆಗಳಲ್ಲಿ ಕಳೆ ತೆಗೆಯಲು ಬಳಸುವ ವಸ್ತುಗಳು ಮತ್ತು ಬ್ಯಾಟ್‌ಗಳು, ಆಭರಣದ ಪೆಟ್ಟಿಗೆಗಳು, ಮೊಬೈಲ್ ಸ್ಟಾಂಡ್‌ಗಳು, ಫೋಟೋ ಕಟ್ಟುಗಳು, ಟ್ರೋಫಿಗಳು, ವಿವಿಧ ಜಾತಿಯ ಪ್ರಾಣಿ-ಪಕ್ಷಿಗಳು, ಸರಗಳು, ಕಿವಿಯೋಲೆಗಳು, ಉಂಗುರಗಳು, ವಿವಿಧ ರೀತಿಯ ಕೀಚೈನ್‌ಗಳು. ಹೊಸ ಹೊಸ ವಿನ್ಯಾಸವನ್ನು ಮಾಡಿದ ಬಳೆಗಳು, ಕೈವಸ್ತ್ರ ಹಾಕುವ ನ್ಯಾಪಕಿನ್ ಸ್ಟಾಂಡ್‌ಗಳು, ಮೇಣದ ಬತ್ತಿಯ ಸ್ಟಾಂಡ್‌ಗಳು, ಜೋಕರ್‌ಗಳು, ಎಣಿಕೆಯ ಗೊಂಬೆಗಳು, ಮಣಿಕಟ್ಟುಗಳು, ಕೆಲವು ದಸರಾ ಗೊಂಬೆಗಳು, ವೃತ್ತಿಗಳಲ್ಲಿ ನಿರತವಾಗಿರುವಂತಹ ಮಹಿಳಾ ಗೊಂಬೆಗಳು, ಕುಂಕುಮದ ಭರಣಿಗಳು, ಬಾಗಿಲಿನ ತೂಗುವ ಮಣಿಗಳು, ಕರಟನ್ ರಿಂಗ್‌ಗಳು, ವಿದ್ಯುತ್ ಪ್ಲೇಟ್‌ಗಳು,

ಕಾರಿನ ಸೀಟ್‌ಗಳಿಗೆ ಬಳಸುವ ಮಣಿ ಪರದೆಗಳು, ಮೀನುಗಳು, ಮೊಸಳೆಗಳು. ಆಟಿಕೆಯ ವಿವಿಧ ರೀತಿಯ ಬುಗುರಿಗಳು, ಹಗ್ಗದ ಆಟದ ಹಿಡಿಕೆಗಳು, ಕೋಳಿಯ ಮೊಟ್ಟೆಗಳು, ಕೊಪ್ರಿ, ಸ್ಟೇಷನರಿ ವಸ್ತುಗಳು, ಹೆಲಿಕ್ಯಾಪ್ಟರ್‌ಗಳು, ರೈಲ್ ಇಂಜಿನ್, ಕೆಲವು ಹೊಸ ಹೊಸ ವಿನ್ಯಾಸದ ಹೂದಾನಿಗಳು, ಪೆನ್ಸಿನ್ ಸ್ಟ್ಯಾಂಡ್, ಸಂಗೀತವನ್ನು ನುಡಿಸುವಂತ ವಾದ್ಯಗಳಾದ ತಬಲ, ವೀಣೆ, ಡಮರುಗ, ಕೊಳಲು ಹಾಗೂ ಎತ್ತಿನ ಗಾಡಿಗಳು, ಕುದರೆಗಾಡಿಗಳು, ಪೋಲಿಸ್, ಉರುಗೋಲುಗಳು, ಇನ್ನೂ ಕೆಲವು ಅಲಂಕಾರಿಕವಾಗಿ ಬಳಸುವ ಚಿಕ್ಕ ಚಿಕ್ಕ ಗೊಂಬೆಗಳ ಸಾಮಾನುಗಳನ್ನು ಇಲ್ಲಿ ತಯಾರಿಸುವುದನ್ನು ನೋಡಬಹುದಾಗಿದೆ.

೧೫೦ ರಿಂದ ೨೫೦ರವರೆಗೆ ಬಗೆಬಗೆಯ ವಸ್ತುಗಳನ್ನು ತಯಾರಿಸಲಾಗುತ್ತದೆ. ಇವುಗಳಿಗೆ ಒಪ್ಪುವಂತಹ ವಸ್ತ್ರ ವಿನ್ಯಾಸ, ಆಕಾರ, ತಂತ್ರ, ಬಣ್ಣಗಾರಿಕೆ ಮತ್ತು ಬಣ್ಣದ ಸಹಾಯದಿಂದ ರಚಿಸುವ ನಕ್ಷಾ ಚಿತ್ರಗಳು, ಕೆಲವು ಗೊಂಬೆಗಳ ಕಣ್ಣು, ಮೂಗು, ಬಾಯಿ, ಹುಬ್ಬುಗಳನ್ನು ತೋರಿಸುವಲ್ಲಿ ಕೆಲವು ಬಣ್ಣಗಳನ್ನು ಉಪಯೋಗಿಸುತ್ತಾರೆ. ಜೊತೆಗೆ ಮಾರ್ಕರ್ ಪೆನ್ನುಗಳನ್ನು ಉಪಯೋಗಿಸುತ್ತಾರೆ. ಇದಲ್ಲದೆ ಕೆಲವು ಜೋಡಣೆಯ ಸಾಮಾನುಗಳಾದ ಉದಾಹರಣೆಗೆ ಗಾಡಿಯ ಚಕ್ರಗಳು, ಗೊಂಬೆಗಳ ಕೈ ಕಾಲುಗಳು, ಕೆಲವು ಪ್ರಾಣಿಗಳ ಕಿವಿಗಳು, ಬಾಲಗಳು, ಕೋಡುಗಳು ಇನ್ನೂ ಹಲವು ಪಕ್ಷಿಗಳ ರೆಕ್ಕೆಗಳು, ಕೊಕ್ಕುಗಳು ಇವುಗಳ ತಳಪಾಯಗಳು ಹಲವು ರೀತಿಯ ಬಿಡಿ ಭಾಗಗಳಾದ ಸಾಮಾನುಗಳನ್ನು ಸಹ ಕೆಲವು ಕರಕುಶಲ ಕಾರ್ಮಿಕರು ತಯಾರಿಸುವುದನ್ನು ಇಲ್ಲಿ ನೋಡಬಹುದಾಗಿದೆ. ಕೆಲವು ಬೊಂಬೆಗಳು ಮತ್ತು ಆಟಿಕೆಯ ಸಾಮಾನುಗಳ ತಂತ್ರಶೈಲಿ ನಿಂತಿರುವ ಭಂಗಿಯ ಹಾಗೂ ಇವುಗಳಿಗೆ ಬಳಸಿರುವ ಬಣ್ಣಗಳ ಬಗ್ಗೆ ಕೆಲವು ಉದಾಹರಣೆಗಳೊಂದಿಗೆ ಇಲ್ಲಿ ವಿವರಿಸಿ ಛಾಯಾಚಿತ್ರಗಳೊಂದಿಗೆ ವಿಸ್ತರಿಸಿ ವಸ್ತುಗಳ ವೈವಿಧ್ಯತೆಗಳನ್ನು ಹೇಳಲಾಗಿದೆ.

**ಬಣ್ಣದ ಆಟಿಕೆಗಳು**

ಬಣ್ಣದ ಮರದ ಆಟಿಕೆಗಳ ತಯಾರಿಕೆಗೆ ಕರ್ನಾಟಕದ ಚನ್ನಪಟ್ಟಣ, ಕಿನ್ನಾಳ ಮತ್ತು ಗೋಕಾಕ್‌ಗಳು ಪ್ರಸಿದ್ಧವಾಗಿವೆ. ಚನ್ನಪಟ್ಟಣದ ಪಾರಂಪರಿಕ ಕುಶಲಕರ್ಮಿಗಳು ಚಿತ್ರಗಾರರೆಂಬ ಸಮುದಾಯಕ್ಕೆ ಸೇರಿದವರು. ಇವರು ಗೊಂಬೆಗಳ ತಯಾರಿಕೆಗೆ ಮುಖ್ಯವಾಗಿ ಹಾಲೆ ಜಾತಿಯ ಮರವನ್ನು ಬಳಸುತ್ತಾರೆ. ಗೋಡೆಗೆ ತೂಗು ಹಾಕುವ ಫಲಕಗಳಲ್ಲಿ ಹಳ್ಳಿಗಳ ದೃಶ್ಯ, ನಿಸರ್ಗ ಚಿತ್ರಣ ಮತ್ತು ನೃತ್ಯ ಕುಣಿತಗಳ ದೃಶ್ಯಗಳನ್ನು ತೀರಾ ನೈಸರ್ಗಿಕವಾಗಿ ಚಿತ್ರಿಸುತ್ತಾರೆ. ಊದುಬತ್ತಿಯ ಹಿಡಿ, ಟವೆಲುಗಳನ್ನು ತೂಗು ಹಾಕುವ ದೊಡ್ಡ ಬಳೆಗಳು ಮೊದಲಾದ ಗೃಹೋಪಯೋಗಿ ವಸ್ತುಗಳನ್ನು ತಯಾರಿಸುತ್ತಾರೆ. ಸ್ಥಳೀಯ ಉಡುಗೆ ತೊಡುಗೆಗಳಿಂದ ಅಲಂಕೃತವಾದ ಬಣ್ಣ ಬಣ್ಣದ ಹಣ್ಣುಮಾರುವ ಮಹಿಳೆಯರು, ತಲೆಯ ಮೇಲೆ ನೀರಿನ ಕೊಡ ಹೊತ್ತು ಮತ್ತು ಕಣಿ ಹೇಳುವ ಚದುರೆಯರು ಮೊದಲಾದ ಗೊಂಬೆಗಳನ್ನು ಅವುಗಳಿಗೆ ಒಪ್ಪುವ ಉಡುಗೆ ತೊಡುಗೆಗಳಿಂದ ಕಂಗೊಳಿಸುತ್ತವೆ. ಜೊತೆಗೆ ತುಂಬಾ ಜನಪ್ರಿಯವಾಗಿವೆ. ಹಾಗೆಯೇ ಪ್ರಾಣಿಗಳ ತಲೆ ಅಥವಾ ತರಕಾರಿಗಳ ಆಕಾರದಲ್ಲಿ ಮಾಡಿದ ಮೆಣಸು ಪುಡಿ ಮತ್ತು ಉಪ್ಪು ಹಾಕಿಡುವ ಭರಣಿಗಳನ್ನು ಮಾಡುತ್ತಾರೆ.

ಚನ್ನಪಟ್ಟಣದ ವಿಶೇಷವೆಂದರೆ ಅಲ್ಲಿಯ ಚಿತ್ರಗಾರರು ತಯಾರಿಸುವ ಮಕ್ಕಳಾಟದ ಅಡುಗೆ ಮನೆಗೆ ಬೇಕಾದ ಪಾತ್ರೆಗಳನ್ನು ಸೂಕ್ಷ್ಮಾಕಾರದ ಪ್ರತಿರೂಪಗಳು, ರುಬ್ಬುಗುಂಡು, ಒರಳು, ಒನಕೆ, ನೀರು ಸೇದುವ ಬಾವಿ ಹೀಗೆ ಮೊದಲಾದ ವಸ್ತುಗಳ ಸಂಪುಟ, ಆಧುನಿಕ ವಸ್ತುಗಳಾದ ಲಾರಿ, ಟೆಲಿಫೋನ್, ಚಂಡು, ರೈಲು, ಸಂಗೀತ ವಾದ್ಯಗಳು, ವಿಮಾನಗಳನ್ನು ಕೂಡಾ ಸಹಜ ಸುಂದರ ಆಟಿಕೆಗಳಾಗಿ ತಯಾರಿಸುತ್ತಾರೆ. ಆಟದ ಗೊಂಬೆಗಳ ತಯಾರಿಕೆಯ ಇನ್ನೊಂದು ಪ್ರಸಿದ್ಧ ಕೇಂದ್ರ ಮಹಿಳಾ ತಯಾರಿಕೆ, ಕೇವಲ ಮಹಿಳೆಯರೇ ಯಂತ್ರಗಳ ಸಹಾಯದಿಂದ ವಿವಿಧ ರೀತಿಯ ಗೊಂಬೆಗಳನ್ನು ತಯಾರಿಸಿ ಅಂದವಾದ ಬಣ್ಣಗಳನ್ನು ಹಾಕುತ್ತಾರೆ. ತುಂಬಾ ಆಕರ್ಷಕವಾದ ಆಟಿಕೆಗಳು ಮಕ್ಕಳಿಗೆ ತುಂಬಾ ಪ್ರಿಯವಾಗಿದ್ದು ಬಹು ಅಗ್ಗದ ದರದಲ್ಲಿ ದೊರೆಯುತ್ತದೆ. ಇವುಗಳಲ್ಲಿ ಜನಪ್ರಿಯವಾದ ಕಲಾಕೃತಿಗಳ ಪಟ್ಟಿಗಳನ್ನು ಹೆಸರಿಸಬಹುದು. ಇವುಗಳನ್ನು ಹೆಂಗೆಳೆಯರೇ ಹೆಚ್ಚಾಗಿ ತಯಾರಿಸುತ್ತಿದ್ದು ಅವರೇ ಮಾರಾಟ ಮಾಡಿಕೊಳ್ಳುತ್ತಾರೆ.

ನಮ್ಮೆಲ್ಲರ ಬಾಲ್ಯದ ನೆನಪುಗಳು, ಸಖ-ಸಖಿಯರು ಈ ಚನ್ನಪಟ್ಟಣದ ಗೊಂಬೆಗಳು ಈ ದಿನಗಳಲ್ಲೂ ಶೋಕೇಸ್‌ಗಳನ್ನೋ, ಮನೆಯ ಬಾಗಿಲು ಕಿಟಕಿಗಳನ್ನೋ ಅಲಂಕರಿಸುವ ಚನ್ನಪಟ್ಟಣದ ಕರಕುಶಲ ವಸ್ತುಗಳದ್ದು ಒಂದು ವಿಶಿಷ್ಟ ಪ್ರಪಂಚವೆ. ಹಾಲೆ ಮರದ ಕಟ್ಟಿಗೆಯಿಂದ ತಯಾರಿಸಲ್ಪಡುವ ಗೊಂಬೆಗಳ ಕೈಗಾರಿಕೆಯ ಕೇಂದ್ರ.

**ಬಾವಿಯಿಂದ ನೀರು ಸೇದುತ್ತಿರುವ ಮಹಿಳೆ**

ಈ ಗೊಂಬೆಯಲ್ಲಿ ನಿಂತ ತಾಯಿ ಮತ್ತು ಮಗಳ ಚಿತ್ರ ಇದೆ. ಈ ಗೊಂಬೆಯಲ್ಲಿ ತಾಯಿ ಗೊಂಬೆಯು ಬಾವಿಯಲ್ಲಿ ನೀರನ್ನು ಸೇದುತ್ತಿರುವ ಸನ್ನಿವೇಶವಿದೆ. ಮಕ್ಕಳು ತಾಯಿ ಇರುವ ಕಡೆಯಲ್ಲಿ ಹಿಂಬಾಲಿಸುವುದನ್ನು ತೋರಿಸುವ ಸುಂದರ ಚಿತ್ರದ ಗೊಂಬೆ ಇದಾಗಿದೆ. ಈ ಚಿತ್ರದಲ್ಲಿ ತಾಯಿಯು ನಿಂತಿರುವ ಭಂಗಿಯೂ, ಬಾವಿಗೆ ಹಗ್ಗವನ್ನು ಬಿಗಿದು ಬಾವಿಯೊಳಕ್ಕೆ ಕೊಡವನ್ನು ಬಿಡುವ ದೃಶ್ಯವಿದೆ. ಮಗಳು ತನ್ನ ತಾಯಿಯ ಹಿಂದೆ ನಿಂತು ತನ್ನ ತಾಯಿಯನ್ನು ನೋಡುತ್ತಿರುವ ದೃಶ್ಯವಿದೆ. ತಾಯಿ ಗೊಂಬೆ ಅಂಗಾಂಗಳ ರಚನೆ, ಉಡುಪು ಮತ್ತು ಕಾರ್ಯ ಚಟುವಟಿಕೆಯ ಸನ್ನಿವೇಶವನ್ನು ಬಹಳ ಸೊಗಸಾಗಿ ಕುಶಲಕರ್ಮಿ ನಿರ್ಮಿಸಿದ್ದಾನೆ. ಅಲ್ಲದೆ ಬಣ್ಣದಿಂದ ಉಡುಪು, ಮೈಬಣ್ಣ, ಕೇಶವಿನ್ಯಾಸ ಹಾಗೂ ಮುಖ, ಮೂಗು, ಬಾಯಿ ಬಣ್ಣಗಳ ರಚನೆ ಕಲಾತ್ಮಕವಾಗಿದೆ.

ಕೈಗಳಿಗೆ ಹಾಕಿಕೊಂಡ ಬಳೆಗಳು ಮತ್ತು ಧರಿಸಿರುವ ಸೀರೆ ಜಾಕೀಟ ಬಣ್ಣವನ್ನು ಚೆನ್ನಾಗಿ ಬಳಸಲಾಗಿದೆ. ಹಿಂದೆ ಇರುವ ಪುಟ್ಟ ಗೊಂಬೆಯನ್ನು ಸಹ ಅದರ ಲಂಗ, ಮೇಲಿನ ಅಂಗಿ, ಕೇಶರಾಶಿಯ ವಿನ್ಯಾಸ, ಮೂಗು ಕಿವಿ, ಕಣ್ಣುಗಳನ್ನು ಬಹಳ ಅಂದವಾಗಿ ಚಿತ್ರಿಸಲಾಗಿದೆ. ಇದಲ್ಲದೆ ಬಾವಿಯ ಆಕಾರ ಮತ್ತು ಬಿಂದಿಗೆ ಆಕಾರ ಇದಕ್ಕೆ ಕಟ್ಟಿದ ಹಗ್ಗವು ನೋಡಲು ತುಂಬ ಸುಂದರವಾಗಿದೆ. ಈ ಚಿತ್ರ ಗೊಂಬೆಯಲ್ಲಿ ನಿಜವಾಗಿಯೂ ಬಾವಿಯಲ್ಲಿ ನೀರು ಸೇದಲು ಸಿದ್ಧವಾಗಿರುವ ಸ್ತ್ರೀ ಚಿತ್ರವೆಂದು ಗಮನ ಸೆಳೆಯುತ್ತದೆ.

**ಬೀಸುತ್ತಿರುವ ಮಹಿಳೆ**

ಈ ಚಿತ್ರವು ನೋಡಲು ತುಂಬಾ ಸುಂದರವಾಗಿದ್ದು, ಈ ಚಿತ್ರದಲ್ಲಿ ಮಹಿಳೆಯು ನಿಜ ಸ್ವರೂಪದಲ್ಲಿ ಕುಳಿತುಕೊಂಡು ಬೀಸುವ ಕಲ್ಲನ್ನು ಬೀಸುತ್ತಿರುವ ಚಿತ್ರವು ತುಂಬ ಸೂಕ್ಷ್ಮ ರೀತಿಯಲ್ಲಿದೆ. ಕಲಾವಿದನು ಕಲಾತ್ಮಕ ವಿನ್ಯಾಸದಿಂದ ಇದನ್ನು ಚಿತ್ರಿಸಿದ್ದಾರೆ. ಈ ಚಿತ್ರಕ್ಕೆ ಹಾಗೂ ಇಲ್ಲಿ ಬೀಸುತ್ತಿರುವ ಸನ್ನಿವೇಶಕ್ಕೆ ಬಣ್ಣವು ಮನಮುಟ್ಟುವಂತೆ ಕಲಾವಿದನು ಬಳಸಿದ್ದಾನೆ. ಇದರ ಕಣ್ಣು, ಮೂಗು, ಬಾಯಿ, ಕೇಶದ ವಿನ್ಯಾಸ ಹಾಗೂ ಸೀರೆ, ಒಳ ಉಡುಪಿನ ವಿನ್ಯಾಸ ಹಾಗೂ ಕುಳಿತ ಭಂಗಿಯನ್ನು ಮರದಿಂದ ಸುಂದರವಾದ ರೀತಿಯಲ್ಲಿ ಇದನ್ನು ತಯಾರು ಮಾಡಿದ್ದಾನೆ. ಇದಲ್ಲದೆ ಮುಂದೆ ಇರುವ ಬೀಸುಕಲ್ಲು ತುಂಬಾ ಕಲಾತ್ಮಕ ರೂಪದಲ್ಲಿ ನಿರ್ಮಿಸಿದ್ದಾನೆ. ಈ ಚಿತ್ರದಲ್ಲಿ ಮಹಿಳೆ ಬೀಸುಕಲ್ಲಿನಿಂದ ಬೀಸುತ್ತಿರುವ ದೃಶ್ಯವಿದೆ. ಅದೇ ರೀತಿಯಾಗಿ ಬಣ್ಣದ ಕೆಲಸವನ್ನು ಕಲಾವಿದನು ಇದರ ಉಡುಪು, ಕೂದಲಿನ ಬಣ್ಣ ಹಾಗೂ ಮುಖ, ಮೈ ಬಣ್ಣವನ್ನು ಈ ಚಿತ್ರದ ಸನ್ನಿವೇಶಕ್ಕೆ ಒಪ್ಪುವ ರೀತಿಯಲ್ಲಿ ಬಳಸಿದ್ದಾನೆ.

**ಕಾಳನ್ನು ಕುಟ್ಟುತ್ತಿರುವ ಮಹಿಳೆಯರು**

ಕಾಳನ್ನು ಕುಟ್ಟುತ್ತಿರುವ ಮಹಿಳೆಯರು ಮತ್ತು ಬೀಸುವ ಕೆಲಸವು ಗ್ರಾಮೀಣ ಪ್ರದೇಶದಲ್ಲಿ ಮಾತ್ರ ಕಾಣಸಿಗುವಂತಹ ದೃಶ್ಯವಾಗಿದೆ. ಚನ್ನಪಟ್ಟಣ ಕರಕುಶಲ ಕರ್ಮಿಗಳು ಈ ದೃಶ್ಯವನ್ನು ತಮ್ಮ ಕೌಶಲ್ಯತೆಯ

ಕೈಚಳಕದಲ್ಲಿ ನಿರೂಪಿಸಿದ್ದಾನೆ. ಮರದ ಸಹಾಯದಿಂದ ಸುಂದರವಾಗಿ ತನ್ನ ಬುದ್ಧಿಶಕ್ತಿಯಿಂದ ಇದನ್ನು ತಯಾರಿಸಲಾಗಿದೆ. ಎದುರು ಬದಿರಿನಲ್ಲಿ ಇಬ್ಬರು ಮಹಿಳೆಯರು ಮಾತನಾಡುತ್ತಾ ನಿಂತುಕೊಂಡು ಕಾಳನ್ನು ಒನಕೆಯ ಸಹಾಯದಿಂದ ಕುಟ್ಟುತ್ತಿರುವ ದೃಶ್ಯ ತುಂಬಾ ಸುಂದರವಾಗಿದೆ.

ಈ ಮಹಿಳೆಯರ ಕೇಶವಿನ್ಯಾಸಕ್ಕೆ ಕಪ್ಪು ಬಣ್ಣದಿಂದ ತಾವು ಕಟ್ಟಿದ ತುರಬನ್ನು ಚಿತ್ರಿಸಲಾಗಿದೆ. ಅಲ್ಲದೆ ಕಪ್ಪು ಬಣ್ಣದ ಸಹಾಯದಿಂದ ಕಣ್ಣು, ಮೂಗು ಹಾಗೂ ಹುಬ್ಬನ್ನು ತೋರಿಸಲಾಗಿದೆ. ಮೇಲೆ ಹಾಗೂ ತುಟಿಗೆ ಕೆಂಪು ಬಣ್ಣವನ್ನು ಬಳಸಲಾಗಿದೆ. ಎಡಭಾಗದ ಗೊಂಬೆಯ ರವಿಕೆಗೆ ಕೆಂಪನ್ನು ಬಳಸಿದೆ. ಈ ಕೆಂಪು ಬಣ್ಣವು ಮುಂಗೈಯವರೆಗೆ ಇದೆ. ಜೊತೆಗೆ ಉಟ್ಟಿರುವ ಸೀರೆಯನ್ನು ನೀಲಿ ಬಣ್ಣದಿಂದ ತೋರಿಸಲಾಗಿದೆ. ಅಲ್ಲದೆ ಕೆಲವು ಹೂಗಳನ್ನು ಬಿಳಿ, ಕೆಂಪು ಹಳದಿ ಹಾಗೂ ಕಪ್ಪು ಬಣ್ಣದ ಸಹಾಯದಿಂದ ಚಿತ್ರಿಸಿದೆ. ಗೊಂಬೆಯು ಉಟ್ಟಿರುವ ಉಡುಗೆಯನ್ನು ಬಣ್ಣದಿಂದ ಪೂರ್ಣಗೊಳಿಸಿದೆ.

ನೀಲಿ ಬಣ್ಣದಿಂದ ಬಳೆ ತೊಡಿಸಲಾಗಿದೆ. ಇದೆ ಬಣ್ಣದಿಂದ ಮುಂಗೈವರೆಗೆ ಲೇಪಿಸಿದೆ. ಸೀರೆಗೆ ಕೆಂಪು, ಹಸಿರು, ಕಪ್ಪು, ಬಿಳಿ ಬಣ್ಣಗಳಿಂದ ಇದನ್ನು ಪೂರ್ಣಗೊಳಿಸಿದೆ. ಸೀರೆಯ ಬಣ್ಣವನ್ನು ಬಳೆಗೆ ಬಳಸಲಾಗಿದೆ. ಈ ಕೆಂಪು ಬಣ್ಣವು ಮುಂಗೈಯವರೆಗೆ ಇದೆ. ಸೀರೆಯ ಬಣ್ಣವನ್ನು ಬಳೆಗಳಿಗೆ ಲೇಪಿಸಿದೆ ಮತ್ತು ಕಲ್ಲಿನ ಸುತ್ತಲೂ ಬಿಳಿ ಬಣ್ಣದಿಂದ ಹೂಗಳನ್ನು ಬಳಸಿದೆ. ಒನಕೆಗೆ ಮರದ ಸಹಜವಾದ ಬಣ್ಣ ಬರುವಂತೆ ವಾರ್ನಿಶ್‌ನ್ನು ಬಳಸಿ ಒನಕೆಯ ಮೇಲ್ಭಾಗದಲ್ಲಿ ಕಪ್ಪನ್ನು ಬಳಸಲಾಗಿದೆ. ಈ ಎಲ್ಲವನ್ನು ಹೊತ್ತು ನಿಂತಿರುವ ಮರದ ಪೆಟ್ಟಿಗೆ ಸಹ ಮರದಂತಹ ಬಣ್ಣವನ್ನು ಲೇಪಿಸಲಾಗಿದೆ.

**ರೈಲಿನಂತೆ ಚಲಿಸುವ ಆಟಿಕೆ**

ಮಕ್ಕಳು ಹಗ್ಗದ ಸಹಾಯದಿಂದ ಅಥವಾ ಕೈಯಿಂದ ನೂಕವಂತೆ ಇದನ್ನು ಸಿದ್ಧಪಡಿಸಲಾಗಿದೆ. ಒಂದು ದುಂಡಾದ ದಪ್ಪವಾದ ಉದ್ದವಾದ ಕೋಲಿನ ಮೇಲೆ ಪ್ರಯಾಣಿಸುತ್ತಿರುವ ಭಂಗಿಯು ಚೆನ್ನಾಗಿ ನಿರ್ಮಿಸಲಾಗಿದೆ. ಇದಲ್ಲದೆ ಛತ್ರಿಯ ರೂಪದಲ್ಲಿ ಮುಂದಿನ ಭಾಗದಲ್ಲಿ ಇರಿಸಲಾಗಿದೆ. ಇದಕ್ಕೆ ಹಳದಿ ಮಿಶ್ರಿತ ಹಸಿರು, ಕೆಂಪು, ಕಂದು, ಬಿಳಿ, ಕೇಸರಿ ಬಣ್ಣಗಳನ್ನು ಬಳಸಲಾಗಿದೆ. ಹಳದಿ ಮಿಶ್ರಿತ ಹಸಿರು ಬಣ್ಣವನ್ನು ಈ ಆಟಿಕೆಯ ಮುಂದಿನ ಭಾಗಕ್ಕೂ. ಹಿಂದಿನ ಭಾಗಕ್ಕೂ ಲೇಪಿಸಿದೆ. ಹಸಿರು ಬಣ್ಣವನ್ನು ಆಟಿಕೆಯ ಕೆಳಭಾಗಕ್ಕೂ ಮತ್ತು ಮೇಲೆ ಕುಳಿತಿರುವ ಪ್ರಯಾಣಿಕರ ಗೊಂಬೆಗೂ, ದೇಹದ ಭಾಗಕ್ಕೂ ಬಳಸಿದೆ. ಕೆಂಪು ಬಣ್ಣವು ಸಾಗುತ್ತಿರುವ ಇಂಜಿನ್ ರೂಪದಲ್ಲಿರುವ ಕೋಲಿನ ಮಧ್ಯಭಾಗಕ್ಕೆ ಬಳಸಲಾಗಿದೆ. ಅಲ್ಲದೇ ಮೇಲೆ ಕುಳಿತಿರುವ ಗೊಂಬೆಗಳಿಗೂ ಬಳಸಿದೆ. ಕಪ್ಪು ಬಣ್ಣದ ತಳಭಾಗದ ಚಿತ್ರಗಳಿಗೆ ಮತ್ತು ಮೇಲೆ ಕುಳಿತಿರುವ ಗೊಂಬೆಗಳ, ಕೂದಲು, ಕಣ್ಣು, ಬಾಯಿ, ಮೀಸೆ, ಹುಬ್ಬುಗಳನ್ನು ಕುಂಚದ ಸಹಾಯದಿಂದ ಬರೆಯಲಾಗಿದೆ. ಕೇಸರಿ ಬಣ್ಣವು ಗೊಂಬೆಗಳ ಮುಖಕ್ಕೆ ಹಾಗೂ ಛತ್ರಿಯಂತೆ ನಿರ್ಮಿಸಿರುವ ಮೇಲ್ಭಾಗಕ್ಕೆ ಬಳಸಿದೆ. ಒಟ್ಟಾರೆಯಾಗಿ ಈ ಎಲ್ಲಾ ಕಲಾಕೌಶಲ್ಯದಿಂದ ಇಂಜಿನ್ ರೂಪದಲ್ಲಿ ಎಳೆಯುವ ಗಾಡಿಯನ್ನು ಸಿದ್ಧಪಡಿಸಲಾಗಿದೆ.

ವಸ್ತ್ರವಿನ್ಯಾಸಕ್ಕೆ ಬಳಸಲಾದ ಬಣ್ಣವನ್ನು ಬಳಸಿ ಪೂರ್ಣಗೊಳಿಸಲಾಗಿದೆ. ಇದರ ಕೇಶ ವಿನ್ಯಾಸಕ್ಕೆ ಕಪ್ಪು ಬಣ್ಣವನ್ನು ಮತ್ತು ಕಣ್ಣು, ಮೂಗು, ಹುಬ್ಬುಗಳಿಗೆ ಕಪ್ಪು ಬಣ್ಣದಿಂದ ಪೂರ್ಣಗೊಳಿಸಿದೆ. ಅಲ್ಲದೆ ಗೊಂಬೆಯ ಕೆಳಭಾಗದಲ್ಲಿಯು ಕಪ್ಪು ಬಣ್ಣದಿಂದ ತಳಪಾಯವನ್ನು ಉಪಯೋಗಿಸಿ ತುಟಿಯನ್ನು ಅಂದಗೊಳಿಸಲು ಕೆಂಪು ಬಣ್ಣವನ್ನು ಬಳಸಲಾಗಿದೆ. ಒಟ್ಟಾರೆ ಛತ್ರಿಯನ್ನು ಹಿಡಿದು ನಿಂತಿರುವ ಮಹಿಳಾ ಗೊಂಬೆಯು ಸುಂದರವಾಗಿದೆ.

**ದಸರಾ ಮೆರವಣಿಗೆಯ ಗೊಂಬೆಗಳು**

ಈ ಗೊಂಬೆಗಳ ಜೋಡಣೆಯನ್ನು ನೋಡಿದರೆ ನಿಜಕ್ಕೂ ಐತಿಹಾಸಿಕ ಪ್ರಸಿದ್ಧಿಯನ್ನು ಪಡೆದಿರುವ ಮೈಸೂರು ದಸರಾ ಮೆರವಣಿಗೆ ನೆನಪಾಗುತ್ತದೆ. ಆನೆಯನ್ನು ರಚಿಸಿ ಅದರ ಮೇಲೆ ಅಂಬಾರಿಯನ್ನು ಮಾಡಲಾಗಿದೆ. ಆನೆಯ ಮುಂದೆ ನಾಲ್ಕು ಜನ ಸೈನಿಕರು ಶಿಸ್ತಿನಿಂದ ಧ್ವಜವನ್ನು ಹಿಡಿದುಕೊಂಡು ನಿಂತಿರುವ ದೃಶ್ಯವು ಇಲ್ಲಿದೆ. ಅಂಬಾರಿಯ ಹಿಂದೆ ಇಬ್ಬರು ಸೈನಿಕರು ಆನೆಯನ್ನು ಹಿಂಬಾಲಿಸಿಕೊಂಡು ಬರುತ್ತಿದ್ದಾರೆ. ಆನೆಯನ್ನು ಸಿಂಗರಿಸಲು ಕಂದುಬಣ್ಣವನ್ನು ಬಳಕೆ ಮಾಡಲಾಗಿದೆ. ಅದರ ಮೇಲೆ ಅಂಬಾರಿಯನ್ನು ಬಂಗಾರದ ಬಣ್ಣದಿಂದ ರಚಿಸಿದ್ದು ಚಿನ್ನದ್ದು ಎಂಬುವಂತೆ ತೋರಿಸಲಾಗಿದೆ. ಅಂಬಾರಿಯ ಮುಂದಿನ ಸೈನಿಕರನ್ನು ಕೆಂಪು ಬಣ್ಣ ಹಾಕಿರುವ ಅಂಗಿಯನ್ನು, ಟೋಪಿಗೆ ಹಸಿರನ್ನು ಬಳಸಲಾಗಿದೆ. ಇದಲ್ಲದೆ ಕೈಯಲ್ಲಿ ಬಾವುಟಗಳನ್ನು ಕೊಡಲಾಗಿದೆ. ಇದೇ ರೀತಿ ಹಿಂದಿನ ಸೈನಿಕರಿಗೂ ಹಸಿರು ಹಾಗೂ ಕೆಂಪು ಬಣ್ಣದಿಂದ ತಲೆಯ ಟೋಪಿಗೆ ಮತ್ತು ವಸ್ತ್ರವನ್ನು ತೊಡಿಸಲಾಗಿದೆ. ಇದಲ್ಲದೆ ಕಣ್ಣುಗಳು ಮತ್ತು ಮೂಗು, ಬಾಯಿಯನ್ನು ಗುರುತಿಸಲು ಕಪ್ಪುಬಣ್ಣವನ್ನು ಬಳಸಲಾಗಿದೆ.

**ಕುದುರೆ ಸವಾರ**

ಕುದುರೆಯನ್ನೇರಿಕೊಂಡು ಹೋಗುತ್ತಿರುವ ಸೈನಿಕ ಸಿಪಾಯಿಯನ್ನು ಗೊಂಬೆಯಲ್ಲಿ ತೋರಿಸಲಾಗಿದೆ. ಕುದುರೆಯನ್ನು ಹಳದಿ ಬಣ್ಣದಿಂದ ಪೂರ್ಣಗೊಳಿಸಿ, ಕಪ್ಪು ಬಣ್ಣದ ಸಹಾಯದಿಂದ ಕಣ್ಣು, ಮೂಗಿನ ದಾರವನ್ನು ಚಿತ್ರಿಸಿದೆ. ಕಾಲಿನ ಭಾಗವನ್ನು ಮತ್ತು ಕೆಲವು ರೇಖೆಗಳಂತಹ ಕುತ್ತಿಗೆಯ ಪಟ್ಟಿಗಳನ್ನು ಹಾಗೂ ಚುಕ್ಕಿಗಳನ್ನು ಇಡಲಾಗಿದೆ. ಇದಲ್ಲದೆ ಬಿಳಿಯ ಬಣ್ಣದ ಕೆಲವು ಗೆರೆಗಳನ್ನು ಹೊಟ್ಟೆಯ ಸುತ್ತ ಬಳಸಲಾಗಿದೆ. ಕುದುರೆಯ ಮೇಲೆ ಕುಳಿತ ಸವಾರನನ್ನು ಕೆಂಪು ಬಣ್ಣದಿಂದ ಮೇಲ್ ಉಡುಪಾಗಿ ತೋರಿಸಲಾಗಿದೆ. ತಲೆಯ ಮೇಲಿನ ಟೋಪಿಯನ್ನು ನೀಲಿ ಬಣ್ಣದಿಂದ ತೋರಿಸಲಾಗಿದೆ. ಕಪ್ಪು ತಲೆಕೂದಲು, ಕಣ್ಣು, ಮೂಗು, ಮೀಸೆ, ಹುಬ್ಬುಗಳು, ಅಂಗಿಯ ಜೋಬಿನ ಭಾಗ ತೋರಿಸಲು ಅಂಗಿಯ ಗುಂಡಿಗೆ ಮತ್ತು ಕಾಲಿನ ಕೆಳ ಭಾಗಕ್ಕೂ ಬಳಸಲಾಗಿದೆ. ಕೈ, ಕಾಲು ಮತ್ತು ಮುಖಕ್ಕೆ ಪಾರನೀಪ್ ಬಣ್ಣವನ್ನು ಉಪಯೋಗಿಸಿದೆ. ಇದಲ್ಲದೆ ಕುದುರೆಯ ಮೂಗಿನ ದಾರವನ್ನು ತೋರಿಸಲು ಲೇಸ್‌ನಂತಹ ದಾರವನ್ನು ಕಟ್ಟಿ ಅದರ ತುದಿಯನ್ನು ಕುದುರೆ ಸವಾರನ ಕೈಗೆ ಕಟ್ಟಲಾಗಿದೆ.

### ಹಾವಾಡಿಗ

ಹಾವಡಿಗನು ಕುಳಿತುಕೊಂಡ ಭಂಗಿಯಲ್ಲಿದ್ದು, ಪುಂಗಿಯನ್ನು ತನ್ನ ಎಡಗೈಯ ಸಹಾಯದಿಂದ ನುಡಿಸುತ್ತಿರುವ ದೃಶ್ಯ ಇದಾಗಿದೆ. ತನ್ನ ಬಲಗೈಯನ್ನು ಬಲ ಕಾಲನ್ನು ಹಿಡಿದುಕೊಂಡು ಕುಳಿತಿರುವ ದೃಶ್ಯವಿದೆ. ಹಾವಡಿಗನು ಕುಳಿತುಕೊಂಡು ಪುಂಗಿಯ ಸಹಾಯದಿಂದ ತನ್ನ ಮುಂದಿನ ಭಾಗದಲ್ಲಿಟ್ಟುಕೊಂಡ ಪುಟ್ಟಿಯಲ್ಲಿ ಹಾವು ಹೊರಬರುತ್ತಿರುವುದು. ಈ ಗೊಂಬೆಗಳ ಜೋಡಣೆಯನ್ನು ತಳಭಾಗದಲ್ಲಿ ಚಿಕ್ಕ ಹಲಗೆಯನ್ನು ಅಳವಡಿಸಿ, ಈ ಹಲಗೆ ಮೇಲೆ ಹಾವಡಿಗನ ದೃಶ್ಯದ ಗೊಂಬೆಗಳನ್ನು ಜೋಡಿಸಲಾಗಿದೆ. ಕಪ್ಪು ಮತ್ತು ಕೆಂಪು ಬಣ್ಣಗಳನ್ನು ಮಾತ್ರ ಕೆಲವು ಭಾಗಗಳಿಗೆ ಬಳಸಲಾಗಿದೆ. ಹಾವಿನ ಹೆಡೆಯ ಭಾಗಕ್ಕೆ ಆಕಾರಕ್ಕೆ ಬಳಸಿ, ಹಾವಾಡಿಗನ ಕಣ್ಣು, ಉದ್ದನೆ ಕೂದಲುಗಳು, ಮೀಸೆಗಳಿಗೆ ಮಾತ್ರ ಬಳಸಲಾಗಿದೆ. ಇನ್ನುಳಿದ ಭಾಗಗಳಿಗೆ ಮರದ ನೈಜವಾದ ರೀತಿಯ ಹಾಗೆಯೇ ಬಿಡಲಾಗಿದೆ.

### ಶಿವ ಲಿಂಗಗಳು

ಪೂಜೆ ಸಿದ್ಧವಾಗಿರುವ ರೀತಿಯಲ್ಲಿ ಈ ಲಿಂಗಗಳನ್ನು ತಯಾರಿಸಲಾಗಿದೆ. ಈ ಲಿಂಗವನ್ನು ನಿಜವಾದ ರೀತಿಯಲ್ಲಿ ತನ್ನ ಶೈಲಿ ಹಾಗೂ ತಂತ್ರದಿಂದ ತಯಾರಿಸಲಾಗಿದೆ. ಲಿಂಗಕ್ಕೆ ಕಪ್ಪು ಬಣ್ಣದಿಂದ ಪೂರ್ಣಗೊಳಿಸಿ, ಬಿಳಿಯ ಬಣ್ಣದಿಂದ ವಿಭೂತಿಯ ಪಟ್ಟಿಗಳನ್ನು ಎಳೆಯಲಾಗಿದೆ. ಈ ಪಟ್ಟಿಯ ಮೇಲೆ ಹಳದಿ ಮತ್ತು ಕೆಂಪು ಬಣ್ಣದಿಂದ ಕುಂಕುಮ ರೀತಿಯಲ್ಲಿ ಬೊಟ್ಟನ್ನು ಇರಿಸಲಾಗಿದೆ. ಅಲ್ಲದೆ ಈ ಲಿಂಗಕ್ಕೆ ಬಿಳಿ, ಹಳದಿ ಕೆಂಪು ಹಸಿರು ಗುಲಾಬಿ ಬಣ್ಣವನ್ನು ಬಳಸಿಕೊಂಡು ಲಿಂಗಕ್ಕೆ ಹಾರವನ್ನು ಚಿತ್ರಿಸಲಾಗಿದೆ.

### ತಬಲಗಳು

ಅಂದವಾದ ರೀತಿಯಲ್ಲಿ ಮರದಿಂದ ತಬಲಗಳನ್ನು ನಿರ್ಮಿಸಲಾಗಿದೆ. ತಬಲಕ್ಕೆ ಲಯಗಳಿಗೆ ತಕ್ಕಂತೆ ಬೇರೆ ಬೇರೆ ರೀತಿಯಲ್ಲಿ ದಾರವನ್ನು ಸಡಿಲುಗೊಳಿಸಲು ಮತ್ತು ಬಿಗಿಯಾಗಿಸಲು ಕೆಲವು ಮರದ ಚೆಕ್ಕೆಗಳನ್ನು ಸಹ ಇಲ್ಲಿ ಬಳಸಲಾಗಿದೆ. ದಾರದಿಂದ ತಬಲದ ಮೇಲ್ಭಾಗದಿಂದ ತಳಭಾಗಕ್ಕೆ ಬಿಗಿಯಾಗಿ ಎಳೆದು ಕಟ್ಟಲಾಗಿದೆ. ತಬಲಗಳಿಗೆ ಹಸಿರು, ಗುಲಾಬಿ ಬಣ್ಣಗಳಿಂದ ಲೇಪಿಸಲಾಗಿದೆ. ಅಲ್ಲದೆ ಕೆಲವು ಗೆರೆಗಳನ್ನು ಯಂತ್ರದ ಸಹಾಯದಿಂದ ರಚಿಸಲಾಗಿದೆ.

### ಆಟದಲ್ಲಿ ನಿರತವಾಗಿರುವ ಮಕ್ಕಳು

ಚಿತ್ರದಲ್ಲಿ ಕಾಣುವಂತೆ ಎರಡು ಹುಡುಗಿಯರು ಮತ್ತು ಹುಡುಗರನ್ನು ಬೊಂಬೆಗಳಾಗಿ ನಿರ್ಮಿಸಲಾಗಿದೆ. ಹುಡುಗಿ ಗೊಂಬೆಯು ಆಟಿಕೆಯ ಗಾಡಿಯ ಮೇಲೆ ಕುಳಿತುಕೊಂಡು ಆಟವಾಡುತ್ತಿದೆ. ಈ ಗೊಂಬೆಯು ಕೆಲವು ಭಾಗಗಳಿಗೆ ಮಾತ್ರ ಕೆಂಪು ಬಣ್ಣದಿಂದ ಕೈಗಳ ತುದಿಗೆ ಮತ್ತು ತುಟಿಗೆ ಹಾಗೂ ಕುದುರೆಯ ಕಿವಿಗಳಿಗೆ ಬಳಸಲಾಗಿದೆ. ಕಪ್ಪು ಬಣ್ಣವನ್ನು ಗೊಂಬೆಯ ಕಣ್ಣುಗಳಿಗೆ ಬಳಸಲಾಗಿದೆ. ಕುದುರೆಯ ಕಣ್ಣು, ಬಾಯಿ ಭಾಗಕ್ಕೆ ಬಳಸಿದೆ. ಹುಡುಗಿ ಗೊಂಬೆಗೆ ಕೂದಲನ್ನು ತೋರಿಸಲು ಉಲನ್ನನ್ನು ಬಳಸಲಾಗಿದೆ. ಒಟ್ಟಾರೆ ಆಟಿಕೆಯೊಂದಿಗೆ ಆಡುತ್ತಿರುವ ದೃಶ್ಯ ಚೆನ್ನಾಗಿದೆ.

ಇದೇ ರೀತಿಯಾಗಿ ಬಲಭಾಗದಲ್ಲಿ ನಿರ್ಮಿಸಿರುವ ಮಗುವಿನ ಬೊಂಬೆಯು ಈಗ ತಾನೆ ತನ್ನ ನಡಿಗೆಯನ್ನು ಆರಂಭಿಸಿ ಗಾಡಿಯೊಂದಿಗೆ ಕಲಿಯುತ್ತಿರುವ ಚಿತ್ರವಿದೆ. ಗಾಡಿಯ ಗಾಲಿಗಳನ್ನು ಹಿಡಿದು ನಿಂತಿರುವ ಮಗುವ್ವ, ಗಾಡಿಯಲ್ಲಿ ನಿಂತುಕೊಂಡು ತನ್ನ ಕೈಯಿಂದ ಹಿಡಿದ ಭಂಗಿಯು ತುಂಬಾ ಸೊಗಸಾಗಿ ಕಲಾವಿದನು ತಯಾರಿಸಿದ್ದಾನೆ. ಈ ಗೊಂಬೆಗೆ ಕೆಂಪು, ಕಪ್ಪು ಬಣ್ಣಗಳನ್ನು ಕೆಲವು ಭಾಗಗಳಾದ ಗಾಡಿಯ ಚಕ್ರಕ್ಕೆ,ಗಾಡಿಯ ಕೋಲಿಗೆ ಮತ್ತು ಮಗುವಿನ ಕಣ್ಣಿನ ಭಾಗ, ಕಾಲಿಗೆ ಮಾತ್ರ ಬಳಸಲಾಗಿದೆ. ಇನ್ನುಳಿದ ಭಾಗವನ್ನು ಮರದಿಂದ ತಯಾರಾದ ನೈಜ ರೂಪವನ್ನು ಇಲ್ಲಿ ನೋಡಬಹುದಾಗಿದೆ. ಮಗುವಿನ ತಲೆಗೆ ಕಟ್ಟು ವಸ್ತ್ರವನ್ನು ಕಟ್ಟಲಾಗಿದೆ.

ಇವುಗಳಲ್ಲದೇ ಗೊಂಬೆಗಳು, ಆಟಿಕೆಗಳು. ಪ್ರಾಣಿ ಪಕ್ಷಿಗಳು, ಸ್ತ್ರೀ ಗೊಂಬೆಗಳು, ಪುರುಷ ಗೊಂಬೆಗಳು, ಎತ್ತಿನ ಗಾಡಿಗಳು, ತಬಲಗಳು, ವೀಣೆಗಳು, ತೊಟ್ಟಿಲುಗಳು, ಕೀ ಚೈನುಗಳು ಇನ್ನೂ ಹಲವಾರು ಬಗೆಯ ಗೊಂಬೆಗಳ ತಯಾರಿಕೆಯಲ್ಲಿ ಕೆಲವು ಬಟ್ಟೆಯಂತಹ, ದಾರದಂತಹ, ಕೆಲವು ರೀತಿಯ ಶೃಂಗರಿಸುವಂತಹ ಮಣಿ, ಮುತ್ತುಗಳನ್ನು ಬಗೆ ಬಗೆಯ ಅಲಂಕಾರಿಕ ಸಾಮಾನುಗಳನ್ನು ಬಳಸಿ ಗೊಂಬೆಯನ್ನು ಅಂದಗೊಳಿಸಲು ಅನೇಕ ವಿಧವಾದ ಸಾಮಾನುಗಳನ್ನು ಬಳಸಲಾಗುತ್ತದೆ.

**ಲೇಖನಿಯ ಸ್ಟ್ಯಾಂಡ್**

ಈ ಸ್ಟ್ಯಾಂಡ್‌ಗಳನ್ನು ಪೆನ್ನು, ಪೆನ್ಸಿಲ್ ಇನ್ನೂ ಕೆಲವು ವಸ್ತುಗಳನ್ನು ಇರಿಸಲು ಬಳಸುತ್ತಾರೆ. ಅನೇಕ ರೀತಿಯ ಆಕಾರಗಳಲ್ಲಿ ವಿವಿಧ ಶೈಲಿಗಳಿಂದ ಹಾಗೂ ಹಲವು ಬಣ್ಣಗಳನ್ನು ಲೇಪಿಸಿದ್ದಾರೆ. ಈ ಲೇಖನಿಯ ಸ್ಟ್ಯಾಂಡ್ ದುಂಡಾದ ತಳಪಾಯದಿಂದ ನಿರ್ಮಿಸಲ್ಪಟ್ಟಿದೆ. ಇದಕ್ಕೆ ಹಸಿರು ಹಾಗೂ ಹಳದಿ ಬಣ್ಣಗಳನ್ನು ಲೇಪಿಸಿದೆ. ಇದರ ಮೇಲೆ ಅನೇಕ ಬಗೆಯ ಹೂವಿನ ಚಿತ್ತಾರಗಳನ್ನು ಹಾಗೂ ನಕ್ಷೆಗಳನ್ನು ಕುಂಚದ ಸಹಾಯದಿಂದ ಚಿತ್ರಿಸಲಾಗಿದೆ. ಇನ್ನೂ ಹಲವು ಪೆನ್ನಿನ ಸ್ಟಾಂಡ್‌ಗಳಿಗೆ ಅನೇಕ ಬಣ್ಣಗಳು, ನಕ್ಷೆ ಚಿತ್ರಗಳನ್ನು ಹಾಕಿ ಸುಂದರವಾಗಿ ಕಾಣುವಂತೆ ಅಂದಗೊಳಿಸಲಾಗಿದೆ.

**ನವಿಲುಗಳು**

ಪಕ್ಷಿಗಳನ್ನು ತಯಾರಿಸಲು ಇದರ ಕೊಕ್ಕು, ತಲೆಯ ಭಾಗ ಮತ್ತು ಮೈ ಭಾಗಗಳನ್ನು ಇವುಗಳ ರೆಕ್ಕೆ ಪುಕ್ಕಗಳನ್ನು ಹಾಗೂ ಇವು ಕುಳಿತುಕೊಳ್ಳುವ ತಳಪಾಯವನ್ನು ಬಿಡಿ ಭಾಗಗಳಾಗಿ ತಯಾರಿಸಿ ನಂತರ ಇವುಗಳನ್ನು ಫೆವಿಕಲ್‌ನ ಸಹಾಯದಿಂದ ಜೊಡಿಸಲಾಗಿದೆ.

ನವಿಲಿನ ಬಿಡಿ ಭಾಗಗಳನ್ನು ತಯಾರಿಸಿಕೊಂಡು ನಂತರ ಇದರ ಜೋಡಣೆಯನ್ನು ಮಾಡಲಾಗಿದೆ. ನವಿಲಿನ ಕೊಕ್ಕು, ತಲೆಯ ಭಾಗ, ದೇಹದ ಭಾಗವನ್ನು ಹಾಗೂ ಹಿಂದಿನ ಗರಿಯ ತುರಾಯಿಗೆ ಹಸಿರು ಬಣ್ಣವನ್ನು ಬಳಸಲಾಗಿದೆ. ಕೊಕ್ಕಿನ ಮೇಲೆ ಬಿಳಿಯ ಬಣ್ಣದಿಂದ ಗೆರೆಯನ್ನು ಎಳೆಯಲಾಗಿದೆ. ಕಣ್ಣಿನ ಭಾಗಕ್ಕೆ ಕಪ್ಪು ಮತ್ತು ಬಿಳಿಯ ಬಣ್ಣವನ್ನು ಬಳಸಿದೆ. ಗರಿಯ ಭಾಗಕ್ಕೂ ಸಹ ಬಿಳಿಯ ಮತ್ತು ಕಪ್ಪು ಬಣ್ಣದಿಂದ ಪೂರ್ಣಗೊಳಿಸಿದೆ. ನವಿಲಿನ ತಳಭಾಗಕ್ಕೆ ಸ್ಪ್ರಿಂಗ್‌ನ್ನು ಬಳಸಿ ಪಕ್ಷಿಯು ಅಲುಗಾಡುವ ರೀತಿಯಲ್ಲಿ

ಮಾಡಲಾಗಿದೆ. ಇದರ ದುಂಡಾದ ತಳಭಾಗವನ್ನು ಕಪ್ಪು ಬಣ್ಣದಿಂದ ಪೂರ್ಣಗೊಳಿಸಿದೆ. ಈ ರೀತಿಯಿಂದ ವಿಭಿನ್ನ ಬಗೆಯ ಬಣ್ಣಗಳಿಂದ ಅನೇಕ ಬಗೆಯ ನವಿಲುಗಳನ್ನು ತಯಾರಿಸಲಾಗಿದೆ.

ಊದುಬತ್ತಿಗಳು

ಹಾಲೆಯ ಮರದ ಹೊಟ್ಟು ಅಥವಾ ಪುಡಿಯು ಗೊಂಬೆಗಳ ತಯಾರಿಕೆಯಲ್ಲಿ ಬಿಳುತ್ತದೆ. ಈ ಪುಡಿಯನ್ನು ಊದುಬತ್ತಿ ತಯಾರಿಕೆಯಲ್ಲಿ ಬಳಸಲಾಗುತ್ತದೆ. ಈ ಪುಡಿಗೆ ಕೆಲವು ಸುಗಂಧ ದ್ರವ್ಯಗಳನ್ನು ಸೇರಿಸಿ ಊದುಬತ್ತಿಯನ್ನು ತಯಾರಿಸುತ್ತಾರೆ.

ಗಣೇಶನ ಮೂರ್ತಿ

ಚನ್ನಪಟ್ಟಣದಲ್ಲಿ ಕರಕುಶಲ ಕಲಾವಿದರು ಅನೇಕ ಬಗೆಯ ಸ್ತ್ರೀ ಮತ್ತು ಪುರುಷ ದೇವರ ಮೂರ್ತಿಗಳನ್ನು ಗೊಂಬೆಗಳ ರೂಪದಲ್ಲಿ ತಯಾರಿಸಿದ್ದಾರೆ. ಹಾಗೂ ದೇವರ ಪೂಜೆಯ ಮಂಟಪಗಳು, ಊದುಬತ್ತಿಯ ಸ್ಟ್ಯಾಂಡ್‌ಗಳ ಮೇಲೆ ಹಲವು ಬಗೆಯ ದೇವರ ಮೂರ್ತಿಗಳು ರಚಿಸುತ್ತಾರೆ. ಇದರಲ್ಲಿ ಗಣೇಶ ಮೂರ್ತಿಯು ಒಂದಾಗಿದೆ.

ಗಣೇಶನ ಮೂರ್ತಿಯು ನೋಡಲು ಸುಂದರವಾಗಿ ಮರದಿಂದ ಬಿಡಿ ಭಾಗಗಳನ್ನು ತಯಾರಿಸಿಕೊಂಡು ಗಣೇಶನ ಆಕಾರಕ್ಕೆ ತರಲಾಗಿದೆ. ಈ ಮೂರ್ತಿ ಗುಲಾಬಿ, ಕಪ್ಪು, ಬಿಳಿ, ಹಳದಿ, ಹಸಿರು, ಕಡುನೀಲಿ ಬಣ್ಣಗಳು ಹಾಗೂ ಬಂಗಾರದಂತೆ ಹೊಳಪನ್ನು ನೀಡುವ ಬಣ್ಣದಿಂದ ಇದನ್ನು ಪೂರ್ಣಗೊಳಿಸಿದೆ. ಗುಲಾಬಿ ಬಣ್ಣವನ್ನು ಕಿವಿ, ಮುಖಕ್ಕೆ, ಕೈಗಳ ಭಾಗದಿಂದ ಹಿಡಿದು ದೇಹದ ಭಾಗದವರೆಗೆ, ಕಾಲುಗಳ ಕೆಳಭಾಗದಿಂದ ಅರ್ಧದವರೆಗೂ ಲೇಪಿಸಿದೆ. ಕಪ್ಪು ಬಣ್ಣವನ್ನು ಕಣ್ಣು, ಕವಿ, ಹುಬ್ಬು, ಅಂಗೈಯ ಗೆರೆಗಳು ಹಾಗೂ ಹಿಂದಿನ ಕೈಗಳಿಗೆ ಮತ್ತು ಕಾಲಿನ ಭಾಗಕ್ಕೆ ಲೇಪಿಸಿದೆ. ಬಿಳಿಯ ಬಣ್ಣವು ದೇಹದ ಮಧ್ಯಭಾಗಕ್ಕೆ ಮತ್ತು ಗಣೇಶನ ವಾಹನವಾದ ಇಲಿಯನ್ನು ತೋರಿಸಲು ಹಾಗೂ ಹಣೆಯ ವಿಭೂತಿಗೆ ಬಳಸಿದೆ. ಹಳದಿ ಬಣ್ಣವು ಮೂರ್ತಿ ಹಾಕಿರುವ ಹಾರಕ್ಕೆ ಮತ್ತು ಪಂಚೆಯ ಅಂಚಿಗೆ ಚುಕ್ಕೆಯ ರೂಪದಲ್ಲಿ ಬಳಸಿದೆ. ಹಸಿರು ಬಣ್ಣವು ಹಾರಕ್ಕೆ, ಕಡು ನೀಲಿ ಬಣ್ಣವನ್ನು ಮೂರ್ತಿ ಕುಳಿತಿರುವ ದುಂಡಾದ ಕೆಳಭಾಗದ ಮತ್ತು ಕೆಳಪಂಚೆಯ ನೆರಿಗೆಗೆ ಸಹ ಗೆರೆಯ ರೂಪದಲ್ಲಿ ಬಳಸಿದೆ. ಬಂಗಾರದ ಬಣ್ಣವನ್ನು ತಲೆಯ ಮೇಲಿನ ಕಿರೀಟಕ್ಕೆ ಬಳಸಿದೆ. ಬಿಳಿಯ ಬಣ್ಣ ಸ್ವಲ್ಪ ಪ್ರಮಾಣದಲ್ಲಿ ಗುಲಾಬಿಯನ್ನು ಸೇರಿಸಿಕೊಂಡು ಗಣೇಶನು ಉಟ್ಟಿರುವ ಪಂಚೆಗೆ ಬಳಸಿದೆ. ಇನ್ನೂ ಹಲವು ರೀತಿಯ ಬಣ್ಣಗಳನ್ನು, ಆಕಾರಗಳನ್ನು ಬಳಸಿಕೊಂಡು ಗಣೇಶ ಮೂರ್ತಿಯನ್ನು ರಚಿಸಿರುವುದು ಚನ್ನಪಟ್ಟಣದಲ್ಲಿ ಕಂಡುಬರುತ್ತದೆ.

ಆಮೆ

ಇದು ಮುಟ್ಟಿದರೆ ಅಲುಗಾಡುವಂತೆ ತಳಪಾಯದಲ್ಲಿ ಆಮೆಗೂ ಒಂದು ಸ್ಪ್ರಿಂಗ್‌ನ್ನು ಜೋಡಿಸಲಾಗಿದೆ. ಇದರ ಸಹಾಯದಿಂದ ಮುಟ್ಟಿದಾಗ ಅಲುಗಾಡುತ್ತದೆ. ಆಮೆಯನ್ನು ಬಹಳ ಸುಂದರವಾಗಿ ನಿರ್ಮಿಸಲಾಗಿದೆ.

ಈ ಆಮೆಗೆ ಕೆಂಪು ಬಣ್ಣದಿಂದ ಪೂರ್ಣಗೊಳಿಸಿದೆ. ಕಪ್ಪು ಬಣ್ಣದಿಂದ ಇದರ ಕಣ್ಣುಗಳು ಹಾಗೂ ಆಮೆ ಮೇಲ್ಭಾಗವನ್ನು ಗೆರೆಗಳನ್ನು ಹೋಲುವಂತೆ ಎಳೆಯಲಾಗಿದೆ. ಹಲವು ಆಮೆಗಳನ್ನು ಬೇರೆ ಬೇರೆ ಬಣ್ಣಗಳಿಂದ ಪೂರ್ಣಗೊಳಿಸಿದೆ.

**ಕೊರಳ ಮಣಿ ಸರಗಳು**

ಗೊಂಬೆಗಳ ತಯಾರಿಕೆಯಲ್ಲಿ ನಿರುಪಯುಕ್ತವಾಗಿ ಚಿಕ್ಕ ಚಿಕ್ಕ ತುಂಡುಗಳಿಂದ ಇವನ್ನು ಮಾಡಲಾಗುತ್ತದೆ. ಸರವಲ್ಲದೆ ಕೆಲವು ಕಿವಿಯ ಓಲೆಗಳು, ಕೀ ಚೈನುಗಳು, ಮತ್ತು ನೆಕ್‌ಲೇಸ್‌ಗಳು, ಉಂಗುರುಗಳು ಹೀಗೆ ಹಲವು ಬಗೆಯ ಸಣ್ಣ ಪುಟ್ಟ ಗೊಂಬೆಯ ಜೊಡಣೇಯ ಸಾಮಾನುಗಳನ್ನು ಮಾಡಲಾಗುತ್ತದೆ.

**ರೊಗೋಲಿ ರಾಠೆ**

ಜಾತ್ರೆ ಮತ್ತು ಹಬ್ಬಗಳ ಸಂದರ್ಭದಲ್ಲಿ ಹಾಗೂ ಹೆಚ್ಚಾಗಿ ಗ್ರಾಮೀಣ ಪ್ರದೇಶದಲ್ಲಿ ನಡೆಯುವ ಕೆಲವು ಪ್ರಸಿದ್ಧ ಜಾತ್ರೆಗಳಲ್ಲಿ ಕಂಡುಬರುತ್ತದೆ. ಇಲ್ಲಿ ತಯಾರು ಮಾಡಿರುವ ಕಲಾವಿದನು ರೊಗೋಲಿ ರಾಠಿಯೇ ಎಂಬ ಭ್ರಮೆಯನ್ನು ಮೂಡಿಸುವಂತಹ ರೀತಿಯಲ್ಲಿ ಇದನ್ನು ತಯಾರಿಸಿದ್ದಾನೆ. ಈ ರೊಗೋಲಿ ರಾಠಿಯಲ್ಲಿ ಕುಳಿತು ಕೊಳ್ಳುವ ತೊಟ್ಟಿಲುಗಳನ್ನು ಮತ್ತೆ ಅದರ ಜನರು ಮತ್ತು ಮಕ್ಕಳು ಕುಳಿತುಕೊಂಡಿರುವ ರೀತಿಯಲ್ಲಿ ಇದನ್ನು ನಿರ್ಮಿಸಿದ್ದಾನೆ. ಕೈಯಿಂದ ತಿರುಗಿಸುವ ರೀತಿಯಲ್ಲಿ ಕೈ ಹಿಡಿಯನ್ನು ಮಾಡಿದ್ದಾನೆ. ಅಲ್ಲದೇ ಈ ಎಲ್ಲವನ್ನು ಹೊತ್ತು ನಿಂತಿರುವ ಎರಡು ಕಂಬಗಳನ್ನು ಇಲ್ಲಿ ಗಮನಿಸಬಹುದು. ಇದಲ್ಲದೇ ಕೆಳಗೆ ಇಡೀ ರೊಗೋಲಿ ರಾಠಿಯು ನಿಂತಿರುವ ತಳಪಾಯವನ್ನು ನಿರ್ಮಿಸಲಾಗಿದೆ. ರೊಗೋಲಿಯ ರಾಠೆಯಲ್ಲಿರುವ ತೊಟ್ಟಿಲುಗಳು ಹಾಗೂ ಹಿಡಿಯನ್ನು ಕೇಸರಿ ಮತ್ತು ನೀಲಿ ಬಣ್ಣದಿಂದ ಪೂರ್ಣಗೊಳಿಸಿದೆ. ಕಂಬಗಳಿಗೂ ಕೇಸರಿ ಮತ್ತು ನೀಲಿ ಬಣ್ಣ ಹಾಗೂ ಹಿಡಿಯನ್ನು ಕೇಸರಿ, ಹಳದಿ ಬಣ್ಣವನ್ನು ಉಪಯೋಗಿಸಿ ಸುಂದರವಾಗಿ ಕಾಣುವಂತೆ ತಯಾರು ಮಾಡಲಾಗಿದೆ. ಕುಂಚದ ಸಹಾಯದಿದ ಕೆಲವು ಬೇರೆ ಬೇರೆ ಬಣ್ಣಗಳನ್ನು ಬಳಸಿಕೊಂಡು ಹೂಬಳ್ಳಿಯ ಚಿತ್ರಗಳನ್ನು ಬರೆಯಲಾಗಿದೆ.

**ಮಗುವಿನ ತೊಟ್ಟಿಲು**

ತೊಟ್ಟಿಲನ್ನು ನೋಡಿದರೆ ನಿಜವಾದ ತೊಟ್ಟಿಲನ್ನು ತೂಗಿಸುವ ರೀತಿಯಲ್ಲಿ ಇದನ್ನು ತಯಾರಿಸಲಾಗಿದೆ. ತೊಟ್ಟಿಲಿನ ನಾಲ್ಕು ಸ್ಟ್ಯಾಂಡ್‌ಗಳು, ಈ ಸ್ಟ್ಯಾಂಡಿನ ಸಹಾಯದಿಂದ ತೂಗು ಹಾಕುವ ತೊಟ್ಟಿಲನ್ನು ಒಂದು ಕೋಲಿನಂತಹ ಕಡ್ಡಿಯಿಂದ ನಿರ್ಮಿಸಿಕೊಂಡು ಇದಕ್ಕೆ ಎರಡು ಕೊಕ್ಕೆಗಳ ಸಹಾಯದಿಂದ ತೊಟ್ಟಿಲನ್ನು ಜೋಡಿಸಲಾಗಿದೆ. ಈ ತೊಟ್ಟಿಲನ್ನು ತೂಗುವುದಕ್ಕೆ ಈ ಕೊಂಡಿಗಳನ್ನು ಸಹಾಯ ಮಾಡುತ್ತವೆ. ತೊಟ್ಟಿಲಿನ ಸ್ಟ್ಯಾಂಡನ್ ಹಾಗೂ ತೊಟ್ಟಿಲನ್ನು ಹಳದಿ ಮತ್ತು ಹಸಿರು ಬಣ್ಣಗಳನ್ನು ಬಳಸಿಕೊಂಡು ಈ ಆಟಿಕೆಯ ಸಾಮಾನುಗಳನ್ನು ಪೂರ್ಣಗೊಳಿಸಿದೆ. ಕೆಲವು ತೊಟ್ಟಿಲುಗಳನ್ನು ಮೂರು ನಾಲ್ಕು ಬಣ್ಣಗಳನ್ನು ಬಳಸಿಕೊಂಡು ಆಟಿಕೆಯ ತೊಟ್ಟಿಲನ್ನು ಪೂರ್ಣಗೊಳಿಸಿದೆ.

## ಮಕ್ಕಳ ಮಾನಸಿಕ ಬೆಳವಣಿಗೆಯ ಮೇಲೆ ಬೀರಬಲ್ಲ ಪರಿಣಾಮಗಳು

ಮಕ್ಕಳ ನಿರೀಕ್ಷೆಗಳು, ಮಕ್ಕಳ ಮನಸ್ಸಿನ ಮೇಲೆ ಪರಿಣಾಮವಿರುವ ವೈಯಕ್ತಿಕ ಕೌಟುಂಬಿಕ ಸಾಮಾಜಿಕ ತಲ್ಲಣಗಳು, ಮಕ್ಕಳ ಮನಸ್ಥಿತಿ ಆ ಮೂಲಕ ಸಾಮಾಜಿಕ ಶೈಕ್ಷಣಿಕ ತಾತ್ವಿಕ ಮಹತ್ವ ಮಕ್ಕಳ ಸಾಂದರ್ಭಿಕ ಚಿತ್ರಗಳು ವಿವರಣೆ ಮಕ್ಕಳ ಪರಿಸರ, ಮಕ್ಕಳ ಪೋಷಕರು ಮತ್ತು ಸಾಮಾಜಿಕ ಜವಾಬ್ದಾರಿ ಮಕ್ಕಳ ಪ್ರಜ್ಞೆ ಮತ್ತು ಅಪ್ರಜ್ಞಾವಸ್ಥೆಯ ಅಭಿವ್ಯಕ್ತಿಯ ಚಿತ್ರಗಳು ಆ ಮೂಲಕ ಮಕ್ಕಳ ಗ್ರಹಿಕೆ. ಈ ಗ್ರಹಿಕೆಗಳು ಮಕ್ಕಳ ಮಾನಸಿಕ ಬೆಳವಣಿಗೆಯ ಮೇಲೆ ಬೀರಬಲ್ಲ ಪರಿಣಾಮಗಳು.

ಕನ್ನಡ ನಾಡಿನ ಸಾಂಸ್ಕೃತಿಕ ಚರಿತ್ರೆಯಲ್ಲಿ ಸಾಹಿತ್ಯ ಕಲೆ, ಸಂಗೀತ, ನಾಟಕ ಇತ್ಯಾದಿ ಪ್ರಕಾರಗಳು ತಮ್ಮ ಪರಂಪರೆಯ ಅಧಿಕೃತತೆಯನ್ನು ಉಳಿಸಿಕೊಳ್ಳುವುದರ ಜೊತೆಗೆ ತನ್ನ ಸಮಕಾಲೀನ ಸಮಾಜಕ್ಕೆ ಕೊಡುಗೆಯನ್ನು ನೀಡಿದೆ. ದೃಶ್ಯಕಲೆಯ ವಿಷಯದಲ್ಲಿ ಈ ಮಾತನು ಸಂಪೂರ್ಣ ಒಪ್ಪಲು ಸಾಧ್ಯವಿಲ್ಲ. ಸಂಪ್ರದಾಯವನ್ನು ಶಾಸ್ತ್ರವನ್ನು ನಂಬಿದ ಕಲಾವಿದರ ಒಂದು ಗುಂಪು ನಮ್ಮ ಪರಂಪರೆಯ ಮೌಲ್ಯದ ಅಂತಃಸತ್ವವನ್ನು ಜೀರ್ಣಿಸಿ ಕೊಳ್ಳದೆ ಕುಶಲತೆಯ ಮೇಲ್ಪದರ ಅಭ್ಯಾಸದ ರಚನಾ ಕ್ರಮಕ್ಕೆ ಒಪ್ಪಿಕೊಂಡರೆ, ಇನ್ನೊಂದು ಗುಂಪು ಇದೆಲ್ಲವನ್ನು ನಿರಾಕರಿಸುತ್ತಾ ತನ್ನದೇ ನಿರ್ದಿಷ್ಟ ತಾತ್ವಿಕ ಮೌಲ್ಯಗಳನ್ನು ಆಧರಿಸಿ ಕಲಾ ಸಂದರ್ಭದಲ್ಲಿ ಮಕ್ಕಳ ಚಿತ್ರಕಲೆಯ ಮತ್ತು ಆಟಿಕೆಗಳ ಒಂದು ವಿಷಯವನ್ನು ಕನ್ನಡದಲ್ಲಿ ಕಲ್ಪಿಸಿಕೊಳ್ಳಲು ಆಗದ ಸ್ಥಿತಿ ಇದೆ. ಸುಮಾರು ೬೦ರ ದಶಕದಲ್ಲಿ ಬೊಂಬೆಗಳು ಮಕ್ಕಳ ಮನಸ್ಸಿನ ಬೆಳವಣಿಗೆಯ ಹಂತಗಳನ್ನು ಅರಿಯುವ ಪ್ರಯತ್ನವಾಗಿ ಒಂದು ಮಗುವಿನ ಶೈಶವಾಸ್ಥೆಯ ಹಂತವೇ ಆಟಿಕೆ ಸಮಾನುಗಳು.

ಇವತ್ತು ನಮ್ಮ ಸಮಾಜದಲ್ಲಿ ನಮ್ಮ ಮಕ್ಕಳೊಂದಿಗಿನ ನಮ್ಮ ಸಂಬಂಧ ಹೇಗಿದೆ ಎಂದರೆ ಮಕ್ಕಳನ್ನು ನಮ್ಮ ಅಂತಸ್ತು, ಒಣಪ್ರತಿಷ್ಠೆ ಹೆಚ್ಚಿಸುವ ಒಂದು ವಿಧಾನವಾಗಿ ಕಾಣುತ್ತಿದ್ದೇವೆ. ಆಧುನಿಕ ಜೀವನಕ್ರಮವು ನಮ್ಮ ಮಕ್ಕಳನ್ನು ಅಸಹಜ ಬೆಳವಣಿಗೆಯತ್ತ ತಳ್ಳಿ ಅವರ ಆಲೋಚನಾ ಕ್ರಮವನ್ನು ನಿಯಂತ್ರಿಸುತ್ತದೆ. ಮಗು ತನ್ನ ಸುಪ್ತ ಪ್ರಜ್ಞೆಯಲ್ಲಿ ಮೂಲದಿಂದ ಎರವಲು ಪಡೆದ ಪ್ರತಿಮೆಯನ್ನು ಚೈತನ್ಯದ ಪ್ರತೀಕವಾಗಿ ಅರ್ಥೈಸಿಕೊಳ್ಳುತ್ತಿರುತ್ತದೆ. ಹೀಗೆ ಪುನರಾವರ್ತನೆಗೊಳ್ಳುವ ಈ ಪ್ರತಿಮೆಯು ಕ್ರಮೇಣ ನಮ್ಮ ಸಮಾಜದ ಸಿದ್ಧ ನಂಬಿಕೆ, ಆಚಾರಗಳ ದಾಳಿಯಿಂದ ಬೇರೆಯದೇ ಕವಲುದಾರಿ ಹಿಡಿಯುತ್ತದೆ. ಅಲ್ಲಿಂದ ಮಗುವಿನ ಮೂಲ ಪ್ರಜ್ಞೆಯ ಸಂಬಂಧವು ಸಂಪೂರ್ಣ ಕಡಿದು ಹೋಗಿ ಹೊರಗಿನಿಂದ ಕೇಳಿ ಹೇಳಿಸಿಕೊಂಡು ಓದಿಕೊಂಡು ಸೃಜನಶೀಲತೆ ತೀವ್ರವಾಗಿ ತೊಡುಗುವ ಮಗುವಿನ ಪ್ರಜ್ಞೆ ವ್ಯಾವಹಾರಿಕ ಪ್ರಪಂಚದ ಸೂಚನೆಗಳನ್ನು ಅನುಸರಿಸದಿದ್ದರೂ ಒಳಗೆ ತನ್ನ ಜಾಡಹಿಡಿದು ಕಾಟ ಇದಲ್ಲ ಎನ್ನುವ ತುಡಿತ ಕಾಡುತ್ತಲೇ ಇರುತ್ತದೆ. ಈ ಹಂತದಲ್ಲೇ ವ್ಯತಿರಿಕ್ತ ಮನಸ್ಥಿತಿ ಪ್ರಾರಂಭವಾಗಿ ಪ್ರೌಢ ಮಗು ತಾನೆ ಸೃಷ್ಟಿಸಿದ ಕೃತಿಯನ್ನು ನಿರಾಕರಿಸುವ

ಮೂಲಕ ಸೃಜನಶೀಲ ಸ್ವಾತಂತ್ರ್ಯದ ಮೊದಲ ಹಂತವನ್ನು ಪ್ರವೇಶಿಸುತ್ತದೆ.

ಮಕ್ಕಳು ಚಿತ್ರ ರಚಿಸುವಲ್ಲಿ ಹೆಚ್ಚು ಆಸಕ್ತಿ ತಾಳುತ್ತವೆ. ಒಂದು ಸರಳ ಪ್ರಶ್ನೆಯ ಮೂಲಕ ಮನುಷ್ಯನ

ಮೂಲ ಅಭಿವ್ಯಕ್ತಿಯ ಎಲ್ಲ ಸಂಕೀರ್ಣ ವಿವರಗಳನ್ನು ವಿಸ್ಮಯಗಳನ್ನು ಕೂಲಂಕುಷವಾಗಿ ಅರಿಯಬಹುದು. ನಮ್ಮ ಸಮಾಜದ ಪ್ರತಿಶತ ೯೦ ಮಕ್ಕಳು ತಾವು ಇಷ್ಟಪಡುವ ಬೇರೆ ಯಾವುದೇ ಆಟಗಳಿಗಿಂತ ಹೆಚ್ಚು ಪ್ರಾಧನ್ಯತೆಯನ್ನು ಗೊಂಬೆಗಳ ಆಟಿಕೆ ಆಟವಾಡುವುದರಲ್ಲಿ ಕಾಲ ಕಳೆಯಲು ಇಷ್ಟಪಡುತ್ತವೆ. ಮಗುವಿಗೆ ಈ ಆಸಕ್ತಿಗೆ ಅನುವಂಶಿಕವಾಗಿ ಬಂದದು ಯಾವ ಪ್ರತಿಭೆಯು ಕಾರಣವಲ್ಲ. ನಮ್ಮ ಸಮಾಜದ ಪ್ರತಿಯೊಂದು ಮಗುವು ಅದು ಯಾವ ವರ್ಗದಿಂದ ಬಂದಿದ್ದಾರೂ ಅದರ ಖಾಸಗಿ ಸಂವಹನ ಭಾಷೆಯಾದ ಆಟಿಕೆಗಳ ಮತ್ತು ಚಿತ್ರದ ಮೂಲಕ ದೂರ ಜಗತ್ತಿನೊಂದಿಗೆ ಪ್ರತಿಕ್ರಿಯಿಸುತ್ತಿರುತ್ತದೆ. ಮಗುವಿಗೆ ಆದ ಅನೇಕ ಅನುಭವಗಳು ಸಿಟ್ಟು, ಖುಷಿ, ಪ್ರೀತಿ, ಇತ್ಯಾದಿ ಅನೇಕ ಸಂವೇದನೆಗಳಿಗೆ ರೂಪಕೊಟ್ಟು ಅಭಿವ್ಯಕ್ತಿಗೊಳಿಸುವ ಕ್ರಿಯೆಯನ್ನು ಚಿತ್ರಕಲೆಯ ಮೂಲಕ ಪ್ರಯತ್ನಿಸುವುದು. ಮಗುವಿಗೆ ತುಂಬಾ ಆನಂದ ಕೊಡುವ ಪ್ರಕ್ರಿಯೆ ತನ್ನ ಮನಸ್ಸಿನಲ್ಲಿದ್ದ ಅದೃಶ್ಯವಾದ ಅನೇಕ ಭಾವನೆಗಳ ಸ್ವರೂಪವನ್ನು ತಾನೇ ಸೃಷ್ಟಿಸಿ ಅದನ್ನು ತಾನೇ ನೋಡಿ ಆನಂದಿಸುವ ಅಥವಾ ತನ್ನ ಮನಸ್ಸಿನ ದುಗುಡವನ್ನು ಆಂತಕವನ್ನು ಹೊರಹಾಕಿ ತನಗೆ ತಾನೇ ಸಾಂತ್ವನಗೊಳಿಸಿಕೊಳ್ಳುವ ಈ ವರ್ಣಮಯ ಕ್ರಿಯೆ ಮಗುವಿಗೊಂದು ಆಪ್ತಮಿತ್ರನಂತೆ, ಅಲ್ಲಿ ಮಗು ಮೌನವಾಗಿ ತನ್ನೆಲ್ಲ ಅನುಭವವನ್ನು ತನಗರಿವಿಲ್ಲದೆಯೇ ತೋಡಿಕೊಳ್ಳುತ್ತದೆ. ಹಾಗಾಗಿ ಚಿತ್ರಕಲೆ ಮಗುವಿಗೆ ಸ್ವಯಂ ಸಾಂತ್ವನಗೊಳಿಸಿಕೊಳ್ಳುವ ಒಂದು ಖಾಸಗಿ ಭಾಷೆಯಾಗಿದೆ.

ದಿನದ ಬಹುಪಾಲು ಅವಧಿಯನ್ನು ಮಕ್ಕಳು ಆಡುವುದರಲ್ಲಿಯೇ ಕಳೆಯುತ್ತವೆ. ಅವರ ಆಟಿಕೆಯ ವಸ್ತುಗಳು ವೈವಿಧ್ಯಮಯವಾಗಿರುವಂತೆ ಚನ್ನಪಟ್ಟಣದ ಗೊಂಬೆ, ಆಟದ ಸಾಮಾನುಗಳನ್ನು ನೋಡಿದಾಗ ಇಂದಿನ ನಮ್ಮ ಮನಸ್ಸು ಥಕ್ಕನೆ ಬಾಲ್ಯದ ಅಂಗಳದ ಎಳೆತನವನ್ನು ಪಡೆಯುತ್ತದೆ. ಅಂದಿನ ದಿನಗಳಲ್ಲಿ, ಬಾಲಕ ಬಾಲಕಿಯರ ಆಟ, ಆಟದ ವಸ್ತುಗಳು ಸರಳತೆಯಿಂದ ಕೂಡಿರುತ್ತಿದ್ದವು. ಹುಡುಗರಿಗೆ ಗೋಲಿ, ಚಿನ್ನಿದಾಂಡು, ಗಾಲಿ ಓಡಿಸುವುದು ಆಟಗಳಾಗಿದ್ದಾಗ, ಹುಡುಗಿಯರು ಚಪ್ಪಾಳೆಯಾಟ, ಕುಂಟೆಬಿಲ್ಲೆ, ಕಣ್ಣಾಮುಚ್ಚಾಲೆ ಆಟ ಆಡುತ್ತಿದ್ದರು. ಇವೆಲ್ಲಾ ಸಾಕಾದರೆ ತಾವೇ ಆಕಾಶ ನೋಡುತ್ತ ಸುತ್ತಿ ತಲೆ ತಿರುಗಿಸಿಕೊಳ್ಳುತ್ತಿದ್ದರು. ಆಟವೇ ಸರಳವಾಗಿದ್ದ ಕಾಲದಲ್ಲಿ ಆಟದ ಸಾಮಾನುಗಳು ಸದಾ ಇದ್ದವು. ಮಣ್ಣಿನ ಒಲೆ, ಕುಡಿಕೆ ಮಾಡಿಕೊಂಡು ಆಟವಾಡುತ್ತಿದ್ದ ಹೆಣ್ಣು ಮಕ್ಕಳಿಗೆ ಒಂದು ಓಲೆಗರಿ ಪೆಟ್ಟಿಗೆ ತುಂಬಾ ಬಣ್ಣ ಬಣ್ಣದ ಚನ್ನಪಟ್ಟಣದ ಆಟದ ಸಾಮಾನು ಸಿಕ್ಕಿಬಿಟ್ಟರೆ ಸ್ವರ್ಗಕ್ಕೆ ಏಣಿ ಹಾಕಿದಂತೆ. ಪೆಟ್ಟಿಗೆಯಲ್ಲಿ ತಟ್ಟೆ, ಲೋಟ, ಸೌಟು, ಬಿಂದಿಗೆ, ಕಡೆಗೆ ನೀರು ಸೇದುವ ಬಾವಿ... ಏನುಂಟೂ ಏನಿಲ್ಲ.

ಕಾಲ ಬದಲಾದಂತೆ ಮಕ್ಕಳಿಗೆ ಆಟವಾಡಲು ಸಮಯವೂ ದುರ್ಲಭವಾಗುತ್ತಿರುವಾಗ ಸಿಗುವ ಅಲ್ಪ ವೇಳೆಯಲ್ಲಿ ಹುಡುಗಿಯರು ಇಲಾಸ್ಟಿಕ್ ರಬ್ಬರನ್ನು ಹಗ್ಗದಂತೆ ಬಳಸಿ ಆಟವಾಡುತ್ತಿದ್ದಾರೆ. ಇನ್ನೂ ವಿಡಿಯೋ ಗೇಮ್ ಇತ್ತೀಚಿನ ದಿನಗಳಲ್ಲಿ ಮೊಬೈಲ್‌ಗಳಲ್ಲಿ ಎಸ್.ಎಂ.ಎಸ್. ಬಗ್ಗೆ ಹೇಳಲೇಬೇಕಾಗಿಲ್ಲ. ಇವುಗಳ ಮಧ್ಯೆ ಆಟದ ಸಾಮಾನು ಪೆಟ್ಟಿಗೆಯ ಕುಡಿಕೆ, ಲೋಟಗಳು ಮಾಯವಾಗುತ್ತ ಬಂದರು ಚನ್ನಪಟ್ಟಣದ ಆಟದ

ವಸ್ತುಗಳು ಫಿನಿಕ್ಸ್ ಪಕ್ಷಿಯಂತೆ ಹೊಸ ರೂಪ ತಳೆದು ಕಾಲದೊಡನೆ ಸಮನಾದ ಹೆಜ್ಜೆ ಹಾಕುತ್ತಾ ತನ್ನ ಅಸ್ತಿತ್ವವನ್ನು ಭದ್ರಪಡಿಸಿಕೊಂಡಿದೆ. ಚನ್ನಪಟ್ಟಣದ ಸಾಮಾನು ಅಥವಾ ಬಚಣೆ ಸಾಮಾನು ಎಂದು ಕರೆಯಿಸಿಕೊಳ್ಳುವ ಈ ವರ್ಣರಂಜಿತ ಬೊಂಬೆ, ಅಲಂಕರಣ ವಸ್ತುಗಳಿಂದಾಗಿ ಕರ್ನಾಟಕದಲ್ಲಿ ಚನ್ನಪಟ್ಟಣಕ್ಕೆ ಒಂದು ವೈಶಿಷ್ಟ್ಯ ಪ್ರಾಪ್ತವಾಗಿದೆ.

## ಅಧ್ಯಾಯ ೫

# ಚನ್ನಪಟ್ಟಣದ ಚಿತ್ತಾರದ ಗೊಂಬೆ ಕಲಾವಿದರು ಮತ್ತು ಮಾರಾಟ ವ್ಯವಸ್ಥೆ

ಅನಾದಿ ಕಾಲದಿಂದಲೂ ಮಾನವನು ತನ್ನ ಕರಕೌಶಲ್ಯವನ್ನು ಹಲವಾರು ವಿಧಗಳಲ್ಲಿ ಬಳಸಿಕೊಂಡು ತನಗೆ ಅಗತ್ಯವಾದ ವಸ್ತುಗಳನ್ನು ಅಭಿವೃದ್ಧಿಪಡಿಸಿದ್ದಾನೆ. ಅವನು ಮಾಂಸಕ್ಕಾಗಿ ಪ್ರಾಣಿಗಳನ್ನು ಬರಿಗೈಯಲ್ಲಿ ಕೊಲ್ಲುತ್ತಿದ್ದನು. ನಂತರ ಅವುಗಳ ಮೂಳೆಗಳು, ಕೋರೆ ಹಲ್ಲುಗಳನ್ನು ಮತ್ತು ಮೊನಚಾದ ಕಲ್ಲುಗಳಿಂದ, ಹರಿತವಾದ ಉಪಕರಣಗಳನ್ನು ತಯಾರಿಸಿ ಕೈ ಕಸುಬಿಗೆ ನಾಂದಿ ಹಾಡಿದ. ಕಾಡುಗಳಲ್ಲಿ ಬೆಳೆಯುವ ಹಣ್ಣು ಬೇರುಗಳನ್ನು ಸಂಗ್ರಹಿಸಿ, ಅವುಗಳನ್ನು ಒಯ್ಯಲು ಜೊಂಡು ಮತ್ತು ಟೊಂಗೆಗಳಿಂದ ಬುಟ್ಟಿಗಳನ್ನು ತಯಾರಿಸಿದ. ತೇವ ಕೂಡಿದ ಜೇಡಿಮಣ್ಣಿಗೆ ಆಕಾರ ಕೊಟ್ಟು ಬಿಸಿಲಿನಲ್ಲಿ ಒಣಗಿಸಿ ಅಥವಾ ಬೆಂಕಿಯಲ್ಲಿ ಬೇಯಿಸಿ ಪಾತ್ರೆಗಳನ್ನು ತಯಾರಿಸಿದನು. ಚಳಿಯಿಂದ ಸಂರಕ್ಷಣೆ ಪಡೆಯಲು ಒರಟು ವಸ್ತ್ರಗಳನ್ನು ಹೆಣೆದನು. ನಂತರ ತನ್ನಲ್ಲಿ ಕಲ್ಪನಾಶಕ್ತಿ ವೃದ್ಧಿಯಾದಂತೆ ಈ ಉಪಯುಕ್ತ ವಸ್ತುಗಳ ಮೇಲೆ ಅಲಂಕಾರಿಕ ಗೆರೆಗಳನ್ನು ಗೀಚಿದ್ದು ಕಂಡುಬರುತ್ತದೆ. ಕ್ರಮೇಣ ಸಾಧನ ಮತ್ತು ವಿಧಾನವನ್ನು ಉತ್ತಮ ಪಡಿಸಿ ಕರಕೌಶಲ್ಯಕ್ಕೆ ಸೌಂದರ್ಯ ಆಯಾಮ ನೀಡಿದ. ಮರಗೆಲಸದಲ್ಲಿ ತೊಡಗಿದ ದಂತವನ್ನು ಕೆತ್ತಿದ, ಪ್ರೌಢಿಮೆಯ ಗುರುತಾಗಿ ಸೂಕ್ಷ್ಮವಾದ ಪಿಂಗಾಣಿಯನ್ನು ತಯಾರಿಸಿದ, ರತ್ನಗಂಬಳಿಗಳನ್ನು ನೇಯ್ದು, ಲೋಹ ಕೆತ್ತನೆಯಲ್ಲಿ ಪರಿಣತಿ ಪಡೆದನು. ಈ ರೀತಿಯಾಗಿ ಜೀವನದಲ್ಲಿ ಹಾಸುಹೊಕ್ಕಾಗಿ ಅಭಿವೃದ್ಧಿಗೊಂಡಿರುವ ಕರಕುಶಲತೆ, ಜಾಗತಿಕ ಇತಿಹಾಸದ ಮೇಲೆ

ಸಾಕಷ್ಟು ಬೆಳಕು ಚೆಲ್ಲುತ್ತವೆ. ಒಂದು ನಿರ್ದಿಷ್ಟ ಸ್ಥಳದಲ್ಲಿ ಒಂದು ನಿರ್ದಿಷ್ಟ ಸಮಯದಲ್ಲಿ ಪ್ರಚಲಿತವಾಗಿದ್ದ ತಾಂತ್ರಿಕ ಪರಿಜ್ಞಾನ, ಜೀವನ ಶೈಲಿಗಳು ಮತ್ತು ಸಂಪ್ರದಾಯಗಳನ್ನು ಇದು ಬಿತ್ತರಿಸುತ್ತದೆ. ಕರಕುಶಲಕಲೆಗಳು ಯಾವುದೇ ಭೂಮಿಯ ಸಂಸ್ಕೃತಿ ಮತ್ತು ಪರಂಪರೆಯ ಪ್ರತೀಕವಾಗಿದೆ.

ಭಾರತದಂತಹ ದೇಶಗಳಲ್ಲಿ ಧಾರ್ಮಿಕ ಪದ್ಧತಿಗಳಿಗೆ ಪುರಾಣ, ಐತಿಹ್ಯ ಮತ್ತು ಸಾಹಿತ್ಯದಲ್ಲಿ ವಿಶಿಷ್ಟ ಸ್ಥಾನಗಳಿವೆ. ಕರಕುಶಲ ವಸ್ತುಗಳ ಜಾಗತಿಕ ಶ್ರೇಣಿ ಅತ್ಯಂತ ವ್ಯಾಪಕವಾಗಿದೆ. ಮೊಟ್ಟಮೊದಲಾಗಿ ವಿಶ್ವದಲ್ಲಿ ಕೈಯಿಂದ ತಯಾರಾದ ವಸ್ತುಗಳೆಂದರೆ ಪ್ರಾಗೈತಿಹಾಸಿಕ ಆಯುಧಗಳು. ತದನಂತರದ ಸರಳ ವಸ್ತುಗಳಾಗಿದ್ದ ಬೆತ್ತದ ಸಾಮಗ್ರಿಗಳು, ಚರ್ಮದ ಉಡುಪುಗಳು, ನೇಯ್ಗೆಯ ವಸ್ತುಗಳು, ಮಡಿಕೆ, ಪಿಂಗಾಣಿ, ಕೃಷಿಗಾಗಿ ಮರಮುಟ್ಟು, ಮರದ ವಸ್ತುಗಳು ಹಾಗೂ ಕೆತ್ತನೆಗಳು, ದಂತದ ಸಾಮಗ್ರಿಗಳು, ಒಡವೆಗಳು, ಲೋಹದ ಸಾಮಗ್ರಿಗಳು ಮತ್ತು ಕೃತಿಗಳು ಪ್ರಾಚೀನ ನಾಗರಿಕತೆಗಳಾದ ಭಾರತ, ಚೀನಾ, ಈಜಿಪ್ಟ್, ಮೆಸೆಪೊಟೋಮಿಯ ಗಳಿಂದಾಗಿ ತಾಂತ್ರಿಕ ಅಭಿವೃದ್ಧಿ ಸಾಧಿಸಿ, ರೋಮನ್ ಸಾಮ್ರಾಜ್ಯದ ವೇಳೆಗೆ ಕ್ಲಿಷ್ಟ ಹಾಗೂ ಸೂಕ್ಷ್ಮ ಕೈಗಾರಿಕೆಯ ಹಂತವನ್ನು ತಲುಪಿದ್ದವು. ಈ ವಲಯಗಳ ಕುಶಲಕರ್ಮಿಗಳು ತಾಂತ್ರಿಕತೆ ಮಾತ್ರವಲ್ಲದೇ ಉತ್ತಮ ಅಭಿರುಚಿಯಲ್ಲೂ ಪಾಶ್ಚಿಮಾತ್ಯ ದೇಶಗಳಿಗೆ ಮಾರ್ಗದರ್ಶನ ಹಾಕಿಕೊಟ್ಟರು ಹಾಗೂ ಪಾಶ್ಚಿಮಾತ್ಯ ಕಲ್ಪನೆಗಳು ಕರಕುಶಲ ಪದ್ಧತಿಗಳ ಮೇಲೆ ಅಪಾರ ಪ್ರಭಾವ ಬೀರಿದವು.

ಕರಕೌಶಲ್ಯವು ಯುರೋಪಿನಲ್ಲಿ ಮಧ್ಯಯುಗದ ವೇಳೆಗೆ ಕ್ರೈಸ್ತ ಚರ್ಚುಗಳ ಸ್ಥಾಪನೆಯೊಂದಿಗೆ ಅಭಿವೃದ್ಧಿಗೊಂಡಿತು. ೧೩ನೆಯ ಶತಮಾನದ ವೇಳೆಗೆ ವಿಶಿಷ್ಟ ಕರಕುಶಲ ಕಲೆಗಳಿಗಾಗಿ ವೃತ್ತಿ ಸಂಘಗಳು ಸ್ಥಾಪಿತವಾಗಿದ್ದವು. ಪುನರುಜ್ಜೀವನದ ಯುಗದಲ್ಲಿ ಈ ವೃತ್ತಿ ಸಂಘಗಳು, ಕುಶಲಕರ್ಮಿಗಳ ಬಾಳು ಕೃತಿಗಳ ಮೇಲೆ ನಿಯಂತ್ರಣ ಹೊಂದಿದ್ದವು. ನಂತರದ ಶತಮಾನಗಳಲ್ಲಿ ಕುಂಚ ಕಲಾವಿದರು ಮತ್ತು ಶಿಲ್ಪಿಗಳನ್ನು ಬುದ್ಧಿ ಜೀವಿಗಳು ಮತ್ತು ದೈವ ಪ್ರೇರಿತರೆಂದು ಪರಿಗಣಿಸಿ ಕುಶಲಕರ್ಮಿಗಳು ಸಾಂಪ್ರದಾಯಿಕ ಕೈ ಕಸುಬಿಗೆ ಬದ್ಧರಾದವರೆಂದು ವ್ಯತ್ಯಾಸ ತೋರಿಸಲಾಯಿತು.

೧೮ನೆಯ ಶತಮಾನದ ಕೈಗಾರಿಕಾ ಕ್ರಾಂತಿಯವರೆಗೆ ಬಹುತೇಕವಾಗಿ ಎಲ್ಲಾ ವಸ್ತುಗಳನ್ನು ಕೈಯಿಂದ ತಯಾರಿಸಲಾಗುತ್ತಿತ್ತು. ಯಂತ್ರಯುಗ ಕೈ ಕೆಲಸದ ತ್ವರಿತ ಅವನತಿಗೆ ಕಾರಣವಾಗಿ ಇಂತಹ ವಸ್ತುಗಳು ಸಾಧಾರಣ ಬಳಕೆಗಾಗಿ ಅಥವಾ ಶ್ರೀಮಂತಿಕೆಯ ಪ್ರದರ್ಶನಕ್ಕಾಗಿ ತಯಾರಾಗಲು ತೊಡಗಿದವು. ೧೯ನೇ ಶತಮಾನದ ಮಧ್ಯದ ವೇಳೆಗೆ ವಿನ್ಯಾಸ ಮತ್ತು ಕಲ್ಪನಾ ಶಕ್ತಿಯ ಅಭಾವವಿದ್ದ ಯಂತ್ರೋತ್ಪತ್ತಿಗಳು ಪರಂಪರಾಗತ ಕರಕುಶಲ
ಮುಂದುವರೆಯಿತು.
ವಸ್ತುಗಳ ವಿರುದ್ಧ ಸಾಧಿಸಿದ ಮೇಲುಗೈ ೨೦ನೇ ಶತಮಾನದಲ್ಲೂ

ಅತ್ಯಂತ ಪುರಾತನವಾದ ಮತ್ತು ಜಗತ್ತಿನೆಲ್ಲೆಡೆ ಚಿರಪರಿಚಿತವಾದ ಕರಕುಶಲಕಲೆಗಳಲ್ಲಿ ಬುಟ್ಟಿಗಳ ತಯಾರಿಕೆ ಪ್ರಮುಖವಾಗಿದೆ. ಕಡ್ಡಿಗಳು ಮತ್ತು ಜೊಂಡುಗಳನ್ನು ಬಳಸಿಕೊಂಡು ಹಕ್ಕಿಗಳು ಗೂಡು ಕಟ್ಟುವುದನ್ನು ಕಂಡುಕೊಂಡರು. ಶಿಲಾಯುಗದ ಮಾನವರು, ಆಹಾರ ಮತ್ತು ನೀರನ್ನು ಸಂಗ್ರಹಿಸಿ ಒಯ್ಯಲು ಹಗುರುವಾದ

ಧಾರಕಗಳ ಅಗತ್ಯಗಳನ್ನು ಮನಗಂಡಿರಬಹುದು. ಮಹಾಭಾರತದಲ್ಲಿ ಕರ್ಣನ ಜನನದ ಪ್ರಸಂಗ, ಬೈಬಲ್ ಕಥೆಗಳಲ್ಲಿ ಶಿಶಿ ಮೋಸಸ್ ಅನ್ನು ಬುಟ್ಟಿಯಲ್ಲಿ ಅಡಗಿಸಿಟ್ಟು ಪ್ರಸಂಗ ಇನ್ನು ಮುಂತಾದವು ಬಟ್ಟೆಗಳ ಉಪಯುಕ್ತತೆಯನ್ನು ಪುಷ್ಟಿಕರಿಸುತ್ತದೆ.

ವಾಣಿಜ್ಯದ ಅಭಿವೃದ್ಧಿಗಾಗಿ ಅಂದರೆ ಸರಕುಗಳ ಮಾರಾಟವನ್ನು ಹೆಚ್ಚಿಸುವುದಕ್ಕಾಗಿ ಕಲೆಯನ್ನು ಬಳಸುವ ಪದ್ಧತಿ ಬಹಳ ಹಳೆಯದು. ಅದಕ್ಕಾಗಿ ಚಿತ್ರಕಲೆಯನ್ನು ಬಳಸಿಕೊಂಡು ಜನರನ್ನು ಆಕರ್ಷಿಸಿ, ವಸ್ತುಗಳ ಬಗೆಗಿನ ವಿವರಗಳನ್ನು ತಿಳಿಸುವುದು ಇದರ ಮೂಲ ಉದ್ದೇಶವಾಗಿದೆ. ಈ ಉದ್ದೇಶಕ್ಕಾಗಿ ಅನೇಕ ಮಾಧ್ಯಮಗಳು ಬಳಕೆಯಾಗಿರುವುದು ಕಂಡುಬರುತ್ತದೆ.

ಯಾವುದೇ ಸುಂದರ ವಸ್ತು ನಮ್ಮ ಕಣ್ಣಿಗೆ ಆಕರ್ಷಣೆಯಾಗುವುದು ಅದರ ಗುಣ. ಅಂತಹ ಸುಂದರ ವಸ್ತುಗಳ ಆಕೃತಿಗಳ, ಸನ್ನಿವೇಶಗಳ ಚಿತ್ರಗಳು ಸಾಮಾನ್ಯವಾಗಿ ಎಲ್ಲರ ಮನಸ್ಸಿಗೂ ಆನಂದವನ್ನು ನೀಡುತ್ತವೆ. ಇದೇ ಮನೋಶಾಸ್ತ್ರದ ಆಧಾರದ ಮೇಲೆ ಚಿತ್ರಕಲೆಯನ್ನು ವಾಣಿಜ್ಯ ಕಲೆಯನ್ನಾಗಿ ಬಳಸಿಕೊಳ್ಳುವ ಕ್ರಮ ಬೆಳೆದು ಬಂದಿರುವುದು ಕಂಡುಬರುತ್ತದೆ.

ಶುದ್ಧವಾದ ಕಲೆ ಕೇವಲ ಮನೋಲ್ಲಾಸಕ್ಕಾಗಿ ಸ್ವಚ್ಛಂದ ಆನಂದಕ್ಕಾಗಿ, ತೃಪ್ತಿಗಾಗಿ ಎಂಬುದು ನಮಗೆಲ್ಲಾ ತಿಳಿದ ವಿಷಯವೇ ಆಗಿದೆ. ಈ ಕ್ರಿಯೆಯಲ್ಲಿ ಕಲಾವಿದ ಯಾವ ಉದ್ದೇಶವೂ ಇಲ್ಲದೆ, ಯಾರಿಗಾಗಿಯೂ ಅಲ್ಲದೆ ಕೇವಲ ತನಗಾಗಿ ತನ್ನ ಸಂತೋಷಕ್ಕಾಗಿ ಚಿತ್ರ ರಚನೆಯಲ್ಲಿ ತೊಡಗುತ್ತಾನೆ. ಆ ಕೃತಿ ರಚನೆ ಆದನಂತರ ಅದು ಬೇರೆಯವರಿಗೂ ಆನಂದವನ್ನು ಕೊಟ್ಟರೆ ಒಳ್ಳೆಯದೇ. ಕಲಾವಿದ ತನ್ನ ಮನಸ್ಸಿನಲ್ಲಿರುವ ಕಳವಳವನ್ನೋ ಯಾವುದೋ ಒಂದು ಉತ್ಕಟವಾದ ಅನುಭವವನ್ನೋ ಮಾನಸಿಕ ಒತ್ತಡವನ್ನೋ ಆನಂದವನ್ನೋ ಹೇಳಿಕೊಳ್ಳಲು ಚಿತ್ರಕಲೆಯನ್ನು ಮಾಧ್ಯಮವಾಗಿ ಬಳಸಿಕೊಳ್ಳುತ್ತಾನೆ.

ಈ ಕ್ರಿಯೆಯಲ್ಲಿ ಮೊದಲು ಅವನು ತನ್ನ ಕಲಾ ಕೌಶಲ್ಯವನ್ನು ಬೆಳೆಸಿಕೊಳ್ಳಬೇಕಾಗುತ್ತದೆ. ವಿಚಾರಕ್ಕೊಂದು ಸುಂದರ ರೂಪ ಕೊಡಲು ಪ್ರಯತ್ನಿಸುವಾಗ ರೇಖೆ ಹಾಗೂ ಬಣ್ಣಗಳ ಬಳಕೆಯನ್ನು ಚೆನ್ನಾಗಿ ಕರಗತ ಮಾಡಿಕೊಳ್ಳಬೇಕಾಗುತ್ತದೆ. ಬೇರೆ ಬೇರೆ ಶೈಲಿಗಳನ್ನು ಬಲ್ಲವನಾಗಿರಬೇಕಾಗುತ್ತದೆ. ಅಭಿವ್ಯಕ್ತಿಗೆ ತಕ್ಕ ಶೈಲಿಯನ್ನು ಬಳಸುವ ಸಾಮರ್ಥ್ಯವನ್ನು ಹೊಂದಬೇಕಾಗುತ್ತದೆ. ಹೊಸದೊಂದು ಶೈಲಿಯನ್ನೇ ಸೃಷ್ಟಿಸುವ ಸೃಜನಶೀಲತೆಯನ್ನು ಪಡೆದುಕೊಳ್ಳಬೇಕಾಗುತ್ತದೆ. ಇಷ್ಟೆಲ್ಲಾ ಪಡೆದುಕೊಂಡಾಗ್ಯೂ ತಂತ್ರಜ್ಞಾನ ಪರಿಣಿತಿಯನ್ನು ಹೊಂದಿದಾಗ್ಯು ಅವನ ಚಿತ್ರ ಯಶಸ್ವಿಯಾಗುತ್ತದೆ ಎಂದೇನೂ ಅಲ್ಲ. ಒಂದು ಚಿತ್ರ ಉತ್ತಮ ಕಲಾಕೃತಿಯಾಗಿ ಪರಿಣಮಿಸಲು ಇದೆಲ್ಲಕ್ಕೂ ಹೆಚ್ಚಾಗಿ ಹೃದಯ ಶ್ರೀಮಂತಿಕೆಯಿಂದ ಹೊರಹೊಮ್ಮಬೇಕಾಗುತ್ತದೆ ಎನ್ನುವುದನ್ನು ಮರೆಯುವಂತಿಲ್ಲ.

ಇವೆಲ್ಲಾ ಗುಣಗಳನ್ನು ಒಳಗೊಂಡು ಒಂದು ಚಿತ್ರ ರಚನೆಯಾದರೂ ಅದು ಜನರ ಮೆಚ್ಚುಗೆಯನ್ನು ಪಡೆಯುವದೆಂದು ಹೇಳಲಾಗುವುದಿಲ್ಲ. ಇಂತಹ ಸ್ಥಿತಿಯಲ್ಲಿ ಒಂದು ಚಿತ್ರವನ್ನು ಒಂದು ಉದ್ದೇಶಕ್ಕಾಗಿ ಬಳಸುವ ದೃಷ್ಟಿಯಿಂದ ನೋಡಿದಾಗ ಅಂಥ ಚಿತ್ರ ಹೇಗಿರಬೇಕು ಎನ್ನುವ ಪ್ರಶ್ನೆ ಉದ್ಭವಿಸುವುದು ಸಹಜ.

ವಾಣಿಜ್ಯೋದ್ಯಮಕ್ಕಾಗಿ ಒಂದು ಚಿತ್ರದ ಬಳಕೆಯಾಗುವುದರ ಉದ್ದೇಶವಿದ್ದಾಗ ಆ ಚಿತ್ರ ಜನಸಾಮಾನ್ಯರನ್ನು ಆಕರ್ಷಿಸುವ ಗುಣವನ್ನು ಹೊಂದಿರಬೇಕಾಗುತ್ತದೆ. ಹಾಗಾಗಿ ಅದು ಜನ ಸಾಮಾನ್ಯರ ಆಸೆಗಳನ್ನು, ಆಕಾಂಕ್ಷೆಗಳನ್ನು ಪೂರೈಸುವ ಲಕ್ಷಣವನ್ನು ಪಡೆದುಕೊಳ್ಳಬೇಕಾಗುತ್ತದೆ. ಅದ್ದರಿಂದ ವೀಕ್ಷಕನ ಮಾನಸಿಕ ಮಟ್ಟದಲ್ಲಿ ಚಿತ್ರ ರಚನೆ ಆಗಬೇಕಾಗುತ್ತದೆ. ಆಗ ಮಾತ್ರ ಚಿತ್ರ ಹೆಚ್ಚು ಹೆಚ್ಚು ಜನರನ್ನು ತಲುಪುತ್ತದೆ. ತನ್ಮೂಲಕ ತನ್ನ ಉದ್ದೇಶವನ್ನು ಪೂರೈಸುವಲ್ಲಿ ಸಫಲವಾಗುತ್ತದೆ ಎಂದು ಹೇಳಬಹುದು.

ಯಾವುದೇ ಒಂದು ವಸ್ತು ಮಾರುಕಟ್ಟೆಯಲ್ಲಿ ಹೆಚ್ಚು ಮಾರಾಟವಾಗಬೇಕು ಎಂಬ ಉದ್ದೇಶ ಹೊಂದಿರುವುದರಿಂದ ಆ ವಸ್ತುವಿನ ಪ್ರಚಾರಕ್ಕಾಗಿಯಾದರೂ ಪ್ರಯತ್ನ ನಡೆಯುತ್ತದೆ. ಪ್ರಚಾರ ಎಂದಾಕ್ಷಣ ಅದು ಹೆಚ್ಚು ಹೆಚ್ಚು ಜನರನ್ನು ತಲುಪುವ ಮಹತ್ವಾಕಾಂಕ್ಷೆಯನ್ನು ಪಡೆದುಕೊಳ್ಳುತ್ತದೆ. ಹೆಚ್ಚು ಜನರನ್ನು ತಲುಪುವ ಉದ್ದೇಶದಲ್ಲಿ ವಿವಿಧ ರೀತಿಯ ಪ್ರಚಾರ ಮಾಧ್ಯಮಗಳತ್ತ ವಿಚಾರ ಹರಿಸುವುದು ಅನಿವಾರ್ಯವಾಗುತ್ತದೆ. ಹೀಗಾಗಿ ಪ್ರಚಾರ ಮಾಧ್ಯಮಗಳ ಯಶಸ್ಸು ಸಮೂಹವನ್ನು ತಲುಪುವ ಮಾಧ್ಯಮಗಳ ಯಶಸ್ವಿ ಬಳಕೆಯಿಂದ ಪೂರೈಸುತ್ತದೆ ಎನ್ನುವ ವಿಷಯ ತಿಳಿದುಬರುತ್ತದೆ.

ಯಾವುದೇ ಪ್ರದೇಶದ ಸಂಸ್ಕೃತಿಯಾಗಲಿ ಅಥವಾ ಪರಂಪರೆಯಾಗಲಿ ಹೊಸ ನೆಲೆಗಳನ್ನು ಪಡೆಮಕೊಳ್ಳುತ್ತಲೆ ಬಂದಿದೆ. ಅದು ಸಂಸ್ಕೃತಿಯ ವಿವಿಧ ಅಭಿವ್ಯಕ್ತಿಗಳನ್ನು ಶ್ರೀಮಂತಗೊಳಿಸುತ್ತಲೆ ಇರುತ್ತದೆ. ಕರಕುಶಲ ಕಲೆಗಳಂತಹ ಮಾಧ್ಯಮಗಳು ಆಯಾ ಕಾಲದ ಜನಸಮುದಾಯದ ಪುರಾವೆಗಳಾಗಿ ಅಳಿದುಳಿದು ಬಂದಿವೆ. ಜನಪದರ ಆಚರಣೆಯಲ್ಲಿರುವ ಈ ಕರಕುಶಲ ಶಿಲ್ಪಗಳಿಗೆ ತಮ್ಮದೇ ಆದ ನಂಬಿಕೆ, ರೂಪ. ಅರ್ಥವಂತಿಕೆ ಕಲ್ಪನೆಗಳ ಶಿಷ್ಟಾಚಾರವಿದ್ದು ಒಂದು ರೀತಿಯಲ್ಲಿ ಪರಂಪರೆಯ ಕೊಂಡಿಗಳಾಗಿ ಮತ್ತು ಕೊಡುಗೆಗಳಾಗಿ ಅವು ಬೆಳೆದು ಬಂದಿವೆ. ಇಂತಹ ಹಲವಾರು ವಿಚಾರಗಳ ಹಿನ್ನೆಲೆಯಲ್ಲಿ ಚನ್ನಪಟ್ಟಣದ ಗೊಂಬೆಗಳ ಕಲೆಯು ಸಹ ಇದೇ ಎಂದು ಹೇಳಬಹುದು.

ಅಂತೆಯೇ ಭಾರತದಲ್ಲಿ ಜಾನಪದ ಕಲೆ ಹಾಗೂ ಕುಶಲಕಲೆ ಜನಜೀವನದ ಅವಿಭಾಜ್ಯ ಅಂಗವಾಗಿ ಬೆಳೆದು ಬಂದಿದೆ. ನಮ್ಮ ಮನೆಗಳಲ್ಲಿ ನಿತ್ಯ ಬಳಸುವ ಸಾಮಗ್ರಿಗಳು ಹಬ್ಬ ಹರಿದಿನಗಳಲ್ಲಿ ಸಡಗರದಿಂದ ನಡೆಯುವ ಉತ್ಸವ ಹಾಗೂ ವಿಧಿ ವಿಧಾನಗಳಲ್ಲಿ ಬಳಸುವ ವಿಶೇಷ ವಸ್ತುಗಳು ನಮ್ಮ ಜನರ ಕರಕುಶಲ ಕಲೆಯ ಅಭಿವ್ಯಕ್ತಿಯ ಮಾಧ್ಯಮಗಳಾಗಿ ನೂರಾರು ಸಾವಿರಾರು ವರ್ಷಗಳಿಂದ ಸಂಸ್ಕೃತಿ, ಸಂಪ್ರದಾಯದ ಬೆಳವಣಿಗೆಯ ಜೊತೆಗೆ ಬೆಳೆದು ಬಂದದ್ದನ್ನು ನಾವು ಗಮನಿಸಬೇಕಾಗಿದೆ. ನಿತ್ಯ ಬಳಕೆಯ ತೊಟ್ಟಿಲು, ಸೋಫಾ, ಟೀಪಾಯಿ, ತೂಗುಮಂಚ, ಕುರ್ಚಿ, ಆಟಿಕೆ ಗೊಂಬೆಗಳು ಇನ್ನು ಮುಂತಾದವುಗಳ ಅನೇಕ ಆಕಾರಗಳನ್ನು ಕಂಡಿದ್ದರೂ ಅವು ಪ್ರಾಯೋಗಿಕ ಸುಂದರ ರೂಪಗಳನ್ನು ಪಡೆದಿವೆ. ಧಾರ್ಮಿಕ ಭಾವನೆಯೇ ಪ್ರಮುಖವಾಗಿದೆ. ಅಲ್ಲದೆ ಮನೆಯ ಸೌಂದರ್ಯ ದೃಷ್ಟಿಯಿಂದಲೂ ಹೊಸ ರೂಪ ಪಡೆದುಕೊಂಡು ಬೆಳೆದು ಐತಿಹಾಸಿಕ, ಪೌರಾಣಿಕ ಚಿತ್ರಗಳು ಮೂಡಿವೆ. ಆದ್ದರಿಂದ ಈ ಸಮೂಹ ಮಾಧ್ಯಮಗಳು ಯಾವುವು ಎಂದು

ತಿಳಿದುಕೊಳ್ಳುವುದು ಮುಖ್ಯವಾಗುತ್ತದೆ. ಒಂದು ಕಾಲಕ್ಕೆ ವರ್ತಮಾನ ಪತ್ರಿಕೆಗಳು ಪ್ರಮುಖ ಸಮೂಹ ಮಾಧ್ಯಮಗಳಾಗಿದ್ದವು. ಅದರಂತೆಯೇ ವಾರಪತ್ರಿಕೆಗಳು, ಪಾಕ್ಷಿಕ ಹಾಗೂ ಮಾಸಪತ್ರಿಕೆಗಳೂ ಕೂಡ ಮಹತ್ವದ ಸಮೂಹ ಮಾಧ್ಯಮಗಳಾಗಿವೆ. ವರ್ತಮಾನ ಪತ್ರಿಕೆಗಳು ಎಂದರೆ ಸಾಮಾನ್ಯವಾಗಿ ದಿನಪತ್ರಿಕೆಗಳು ಎಂದೇ ಹೇಳಬಹುದು. ಇದರ ಆಯುಷ್ಯ ಕೇವಲ ಒಂದು ದಿನದ್ದು. ಹಾಗಾಗಿ ಇದಕ್ಕಾಗಿ ಬಳಕೆಯಾಗುವ ಹಾಳೆಯ ಗುಣಮಟ್ಟ ಕೂಡ ಅಷ್ಟಕಷ್ಟೇ. ಈ ಎರಡು ಅಂಶಗಳನ್ನು ಗಮನದಲ್ಲಿರಿಸಿಕೊಂಡು ಅವುಗಳಲ್ಲಿ ಪ್ರಕಟವಾಗುವ ಜಾಹೀರಾತುಗಳ ರಚನೆ ಆಗುತ್ತದೆ. ನಮ್ಮ ದೇಶದಲ್ಲಿ ಹೆಚ್ಚಾಗಿ ದಿನಪತ್ರಿಕೆಗಳು ಸಾಧಾರಣ ಗುಣಮಟ್ಟದ ಬಿಳಿಹಾಳೆಯ ಮೇಲೆ ಕಪ್ಪು ಶಾಹಿಯಿಂದ ಮುದ್ರಣವಾಗುವುದರಿಂದ ಇದರಲ್ಲಿ ಕಾಣಿಸಿಕೊಳ್ಳುವ ಜಾಹೀರಾತುಗಳು ಕೂಡ ಹೆಚ್ಚಾಗಿ ಕಪ್ಪು ಬಿಳುಪಿನಲ್ಲಿಯೇ ಬರುತ್ತವೆ. ಇತ್ತೀಚೆಗೆ ಆಫ್‌ಸೆಟ್ ಮುದ್ರಣ ಬಳಕೆ ಬಂದನಂತರ ಕೆಲವು ಪುಟಗಳು ಅದರಲ್ಲೂ ಹೆಚ್ಚಾಗಿ ಶುಕ್ರವಾರ ಪ್ರಕಟವಾಗುವ ಹೆಚ್ಚು ಜನ ಇಷ್ಟಪಡುವ ಚಲನಚಿತ್ರಗಳಿಗೆ ಸಂಬಂಧಿಸಿದ ಪುಟಗಳು ಮತ್ತು ಭಾನುವಾರದ ಸಾಂಸ್ಕೃತಿಕ ಹಾಗೂ ಸಾಹಿತ್ಯಿಕ ಪುರವಣಿಗಳು ಹೆಚ್ಚಾಗಿ ಬಣ್ಣಗಳಲ್ಲಿ ಮುದ್ರಣವಾಗುವುದನ್ನು ನಾವು ನೋಡುತ್ತೇವೆ. ಹೀಗಾಗಿ ಈ ಪುಟಗಳಲ್ಲಿ ಬಣ್ಣದ ಜಾಹೀರಾತುಗಳು ಪ್ರಕಟವಾಗುತ್ತಿರುವುದನ್ನು ಗಮನಿಸುತ್ತೇವೆ. ಸಾಮಾನ್ಯವಾಗಿ ನಿಯತಕಾಲಿಕೆಗಳಾದ ಸಾಪ್ತಾಹಿಕ, ಪಾಕ್ಷಿಕ ಹಾಗೂ ಮಾಸಿಕ ಪತ್ರಿಕೆಗಳು ಬಣ್ಣಗಳಲ್ಲೇ ಪ್ರಕಟವಾಗುವುದರಿಂದ ಇದಕ್ಕಾಗಿ ಉತ್ತಮ ಗುಣಮಟ್ಟದ ನಯವಾದ ಮೈಯುಳ್ಳ ಕಾಗದಗಳನ್ನು ಬಳಸಲಾಗುತ್ತದೆ. ಇದರ ಮುದ್ರಣ ಸುಂದರವಾಗಿಯೂ ಆಕರ್ಷಕವಾಗಿಯೂ ಇರುತ್ತದೆ. ಹಾಗಾಗಿ ಇಂತಹ ನಿಯತಕಾಲಿಕೆಗಳೆಲ್ಲ ಸುಂದರ ಬಣ್ಣಗಳ ಸಾಕಷ್ಟು ವಿವರಗಳಿಂದ ಕೂಡಿದ ಸಂಯೋಜನೆಯುಳ್ಳ ಕೈಯಿಂದ ಬಿಡಿಸಿದ ಚಿತ್ರಗಳು ಹಾಗೂ ಛಾಯಾಚಿತ್ರಗಳನ್ನು ಉಪಯೋಗಿಸಿ ಸಿದ್ಧಪಡಿಸಿದ ಜಾಹೀರಾತುಗಳು ಆಕರ್ಷಣೀಯವಾಗಿ ಪ್ರಕಟವಾಗುತ್ತಿರುವುದನ್ನು ನಾವು ನೋಡುತ್ತೇವೆ. ಇಂತಹ ಪತ್ರಿಕೆಗಳು ಬಹು ಜನರ ಹತ್ತಿರ ಉಳಿಯುವುದರಿಂದ ಇವುಗಳಲ್ಲಿ ಪ್ರಕಟಗೊಂಡ ಜಾಹೀರಾತುಗಳು ಮತ್ತೆ ಮತ್ತೆ ಹೆಚ್ಚು ಜನರಿಗೆ ಕಾಣಿಸಿಕೊಂಡು ಹೆಚ್ಚಿನ ಸಾರ್ಥಕತೆಯನ್ನು ಪಡೆದುಕೊಂಡು ತಮ್ಮ ಉದ್ದೇಶಗಳನ್ನು ಸಾಧಿಸಿಕೊಳ್ಳುವಲ್ಲಿ ಸಫಲವಾಗುತ್ತವೆ ಎಂದೂ ಹೇಳಬಹುದು.

ಇಂತಹ ಜಾಹೀರಾತುಗಳು ಮುಖ್ಯವಾಗಿ ಯಾವ ಶೈಕ್ಷಣಿಕ ಹಾಗೂ ಬೌದ್ಧಿಕ ಮಟ್ಟದ ಜನರಿಗಾಗಿ, ಎಂತಹ ಆರ್ಥಿಕ ಸ್ತರದವರಿಗಾಗಿ ಹಾಗೂ ಯಾವ ಸಂದರ್ಭಗಳಿಗಾಗಿ ಎಂದೆಲ್ಲಾ ಯೋಚನೆಯ ಹಿನ್ನೆಲೆಯಿಂದ ಸಿದ್ಧಪಡಿಸಬೇಕಾಗುತ್ತದೆ. ಹಾಗಾಗಿ ಅವುಗಳ ವಿಷಯಗಳು ಅದಕ್ಕಾಗಿ ಬಳಸುವ ಚಿತ್ರಗಳು, ವಿನ್ಯಾಸಗಳು ಅವರವರ ಮನೋವೈಜ್ಞಾನಿಕ ದೃಷ್ಟಿಯಿಂದಲೇ ಆಲೋಚಿಸಿ ರಚಿಸಬೇಕಾಗುತ್ತದೆ. ರಾಜಕೀಯ, ಸಾಂಸ್ಕೃತಿಕ, ಸಾಹಿತ್ಯಿಕ, ವೈಜ್ಞಾನಿಕ, ಧಾರ್ಮಿಕ, ತಾಂತ್ರಿಕ, ಔದ್ಯಮಿಕ, ಶೈಕ್ಷಣಿಕ, ಸಿನಿಮಾ, ಟಿ.ವಿ. ಹಾಗೂ ಮನೋರಂಜನೆ ಹೀಗೆ ಬೇರೆ ಬೇರೆ ನಿಯತಕಾಲಿಕೆಗಳು ಬೇರೆ ಬೇರೆ ವಿಷಯಗಳನ್ನೇ ಪ್ರಮುಖವಾಗಿ ಇರಿಸಿಕೊಂಡು ಪ್ರಕಟ ವಾಗುವುದನ್ನು ನಾವು ನೋಡುತ್ತೇವೆ. ಅದೂ ಅಲ್ಲದೇ ಸ್ತ್ರೀಯರಿಗಾಗಿ, ಮಕ್ಕಳಿಗಾಗಿ, ಯುವಕರಿಗಾಗಿ,

ವಯಸ್ಕರಿಗಾಗಿ ಹಾಗೂ ವಯೋವೃದ್ಧರಿಗಾಗಿ ಕೂಡ ಪ್ರತ್ಯೇಕವಾಗಿ ನಿಯತಕಾಲಿಕೆಗಳು ಪ್ರಕಟವಾಗುವುದನ್ನು ನಾವು ಗಮನಿಸುತ್ತೇವೆ. ಹೀಗಾಗಿ ಆಯಾ ವಿಷಯಗಳಿಗೆ ಸಂಬಂಧಿಸಿದ ಜಾಹಿರಾತುಗಳು ಅಂಥಲ್ಲಿ ಹೆಚ್ಚಾಗಿ ಪ್ರಕಟಗೊಳ್ಳುತ್ತವೆ. ಆದ್ದರಿಂದ ಜಾಹೀರಾತುಗಳು ಯಾರಿಗೆ ತಲುಪಬೇಕೋ ಅಂಥವರಿಗೆ ಹಾಗೂ ಅಂಥ ವಿಷಯಗಳಿಗೆ ಸಂಬಂಧಪಟ್ಟವರಿಗೆ ಪರಿಣಾಮಕಾರಿಯಾದ ರೀತಿಯಲ್ಲಿ ತಲುಪಿ ಹೆಚ್ಚಿನ ಪ್ರಯೋಜನೆಯನ್ನು ಪಡೆಯಲು ಬೇಕು ಎನ್ನುವುದೇ ಇದರ ಉದ್ದೇಶವಾಗಿದೆ.

ಬೇರೆ ಬೇರೆ ಋತುಮಾನಗಳಲ್ಲಿ ಆಗಿನ ಹವಾಮಾನಕ್ಕೆ ಅನುಗುಣವಾಗಿ ಜಾಹೀರಾತುಗಳು ಪ್ರಕಟ ವಾಗುವುದನ್ನು ನಾವು ನೋಡುತ್ತೇವೆ. ಅಂದರೆ ಚಳಿಗಾಲದಲ್ಲಿ ಸ್ವೆಟರ್, ಉಣ್ಣೆಬಟ್ಟೆಗಳು ಹಾಗೂ ರಗ್ಗುಗಳು ಜಾಹೀರಾತುಗಳು. ಬೇಸಿಗೆಯಲ್ಲಿ ಪ್ಯಾನು, ಫ್ರಿಜ್ಜು, ಏರ್‌ಕೂಲರ್ ಹಾಗೂ ಏರ್‌ಕಂಡೀಶನರ್, ಐಸ್‌ಕ್ರಿಮ್, ತಂಪುಪಾನೀಯಗಳು, ತೆಳುವಾದ ಹಾಗೂ ಅರಳೆಯ ನೂಲಿನ ಬಟ್ಟೆಗಳ ಜಾಹೀರಾತುಗಳು ರಜಾದಿನಗಳಲ್ಲಿ ಪ್ರವಾಸಕ್ಕೆ ಸಂಬಂಧಿಸಿದ ಸಾರಿಗೆ ಬಸ್ಸು, ರೈಲು ಹಾಗೂ ವಿಮಾನ ಸಂಸ್ಥೆಗಳ, ಹೋಟೆಲ್‌ಗಳ, ಪ್ರವಾಸೋದ್ಯಮದವರಿಂದ ಪ್ರೇಕ್ಷಣೀಯ ಸ್ಥಳಗಳ ಜಾಹೀರಾತುಗಳು; ಹಬ್ಬದ ದಿನಗಳಲ್ಲಿ ಸೀರೆ, ಬಟ್ಟೆ ಹಾಗೂ ಗೃಹೋಪಯೋಗಿ ವಸ್ತುಗಳ ಹಾಗೂ ಇಳುವರಿ ದರಗಳಲ್ಲಿ ವಿಶೇಷ ರಿಯಾಯಿತಿ ಬೆಲೆಗಳ ಮಾರಾಟಕ್ಕೆ ಸಂಬಂಧಿಸಿದ ಜಾಹೀರಾತುಗಳು ಹೆಚ್ಚಾಗಿ ಕಾಣಿಸಿಕೊಳ್ಳುವುದನ್ನು ನಾವು ನೋಡುತ್ತೇವೆ.

ಜಾಹೀರಾತುಗಳಲ್ಲಿ Sale Oriented ಅಂದರೆ ವಸ್ತುಗಳ ಮಾರಾಟದ ಉದ್ದೇಶದ ಹಾಗೂ Service Oriented ಅಂದರೆ ಸೇವಾ ಧೋರಣೆಯ ಸಂಸ್ಥೆಗಳು ಎಂದು ವಿಂಗಡಣೆಯನ್ನು ಒಂದು ಬಗೆಯಲ್ಲಿ ಮಾಡಬಹುದು. ಒಂದು ಕಾಲಕ್ಕೆ ಹೆಚ್ಚಾಗಿ ವಸ್ತುಗಳ ಮಾರಾಟದ ದೃಷ್ಟಿಯಿಂದಲೇ ಜಾಹೀರಾತುಗಳು ಪ್ರಕಟವಾಗುತ್ತಿದ್ದವು. ಆದರೆ ಇತ್ತೀಚಿಗೆ ಈ ಮಾಧ್ಯಮ ಅನೇಕ ಬಗೆಯ ಸೇವಾ ಜಾಹೀರಾತುಗಳನ್ನು ಹೊಂದಿರುವುದು ಬೆಳೆಯುತ್ತಿರುವ ಇಂದಿನ ಸಂಕೀರ್ಣ ಸಮಾಜದ ಒಂದು ಬಹುದೊಡ್ಡ ಮುಖ ಹಾಗೂ ಅದರ ಮಹತ್ವವನ್ನು ಎತ್ತಿತೋರುವಂತೆ ಮಾಡಿದೆ.

ನೇರವಾಗಿ ವಸ್ತುಗಳನ್ನು ಗ್ರಾಹಕರಿಗೆ ತೋರಿಸುವ ತನ್ಮೂಲಕ ಮಾರಾಟವನ್ನು ಹೆಚ್ಚಿಸಿಕೊಳ್ಳುವ ಉದ್ದೇಶದಿಂದಲೇ ಹೆಚ್ಚಿನ ಜಾಹೀರಾತುಗಳು ಪ್ರಕಟಗೊಳ್ಳುತ್ತವೆ. ಅಂದರೆ ವಸ್ತುಗಳ ತಯಾರಕರು ತಾವು ಉತ್ಪತ್ತಿ ಮಾಡುವ ವಸ್ತುಗಳ ಬಗ್ಗೆ ಏನೂ ಹೇಳದೆ ತಮ್ಮ ಸಂಸ್ಥೆಯ ಬಗ್ಗೆ ಅವರ ಇತಿಹಾಸ, ಅವರ ಚಿಂತನೆಯ ಕ್ರಮ, ಗ್ರಾಹಕರ ಸೇವೆಯ ಮನೋಭಾವ, ಆರ್ಥಿಕ ಕ್ಷಮತೆ ಇತ್ಯಾದಿಗಳ ಬಗ್ಗೆ ಹೇಳಿ ತಮ್ಮ ಘನತೆ ಹಾಗೂ ಗೌರವ ಹೆಚ್ಚಿಸಿಕೊಂಡು ತನ್ಮೂಲಕ ತಾವು ತಯಾರಿಸುವ ವಸ್ತುಗಳ ಬಗ್ಗೆ ಜನರಲ್ಲಿ ಪ್ರೀತಿ ಹಾಗೂ ವಿಶ್ವಾಸ ಮೂಡುವಂತೆ ಮಾಡಿ ಅವರ ಮನಸ್ಸಿನ ಮೇಲೆ ಗಾಢವಾದ ಪರಿಣಾಮ ಬೀರುವ ರೀತಿಯಲ್ಲಿ ಕೂಡ ಜಾಹೀರಾತಿಗಳು ಪ್ರಕಟವಾಗುತ್ತಿರುವುದನ್ನು ನಾವು ಗಮನಿಸಬಹುದಾಗಿದೆ. ನೇರವಾಗಿ ಅಲ್ಲದೆ ಹೋದರೂ ಇಂತಹ ಜಾಹೀರಾತುಗಳ ಉದ್ದೇಶ ಮಾತ್ರ ಒಂದೇ ಆಗಿರುತ್ತದೆ ಎನ್ನುವುದನ್ನು ಮರೆಯುವಂತಿಲ್ಲ.

ಕೆಲವು ಸಲ ಮಾರಾಟದ ವಸ್ತುಗಳ ಪ್ರಚಾರ ಮಾಡಲು ಹಾಗೂ ಮಾರಾಟವನ್ನು ಹೆಚ್ಚಿಸಲು ಆ ವಸ್ತುವಿನ ಗುಣ ವಿಶೇಷಗಳನ್ನೊಳಗೊಂಡ ಹಾಗೂ ವಸ್ತುವಿನ ಬಗೆಗಿನ ಎಲ್ಲ ವಿವರಗಳನ್ನು ಒಳಗೊಂಡ ಸುಂದರವಾದ ಆಕರ್ಷಕ ವಿನ್ಯಾಸವನ್ನು ಹೊಂದಿದ (Folder) ಮಡಿಕೆ ಪತ್ರವನ್ನು ನೇರವಾಗಿ ಅಂಚೆಯ ಮೂಲಕ ಸಂಬಂಧಪಟ್ಟವರಿಗೆ ಕಳಿಸಿಕೊಡುವ ಇನ್ನೊಂದು ವಿಧಾನವೂ ಪ್ರಚಲಿತವಿದೆ. ಅದಕ್ಕೆ ನೇರ ಅಂಚೆ ಪ್ರಸಾರ (Direct Mail Advertisement) ಎಂದು ಹೇಳುತ್ತಾರೆ. ಈ ಕ್ರಮವನ್ನು ಹೆಚ್ಚಾಗಿ ಪುಸ್ತಕಗಳ ಮಾರಾಟದ ಸಂಸ್ಥೆಗಳವರು ಬಳಸುವುದನ್ನು ನಾವು ನೋಡುತ್ತೇವೆ. ಶಿಕ್ಷಣ ಸಂಸ್ಥೆಗಳು, ವಾಚನಾಲಯಗಳು, ವಿಜ್ಞಾನ ಅಥವಾ ವೈದ್ಯಕೀಯ ಸಂಸ್ಥೆಗಳು ಇಂತಹ ನೇರ ಅಂಚೆ ಪ್ರಚಾರ ಪತ್ರಗಳನ್ನು ಪಡೆಯುವ ಸಂಸ್ಥೆಗಳು. ಇವರು ಸಾಮಾನ್ಯವಾಗಿ ತಮಗೆ ಬೇಕಾದ ಪುಸ್ತಕಗಳ ಪಟ್ಟಿ, ಸಾಧನ ಸಲಕರಣೆಗಳು, ಉಪಕರಣಗಳು ಹಾಗೂ ಔಷಧಿಗಳು ಇತ್ಯಾದಿಗಳ ವಿವರಗಳನ್ನು ಈ ವಿಧಾನದಲ್ಲೇ ಪಡೆದುಕೊಳ್ಳುವುದು ಹಾಗೂ ಕೊಂಡುಕೊಳ್ಳುವುದು ನಮ್ಮಗೆಲ್ಲಾ ತಿಳಿದ ವಿಷಯವೇ ಆಗಿದೆ.

ಮಾರಾಟ ಮಳಿಗೆಗಳ ಒಳಾಂಗಣದಲ್ಲಿ Consumer Goods ನಿತ್ಯ ಬಳಕೆಯ ವಸ್ತುಗಳ, ಸೌಂದರ್ಯ ಸಾಧನಗಳ Domestic durables ನಿತ್ಯ ಬಳಕೆಯ ದೀರ್ಘಬಾಳಿಕೆಯ ವಸ್ತುಗಳ, Domestic Appliances ಗೃಹೋಪಯೋಗಿ ಪರಿಕಗಳ ಬಗೆಗಿನ ಕಿರಿಯ ಫಲಕಗಳನ್ನು ಗೋಡೆಗೆ ಅಂಟಿಸಿರುವುದನ್ನು ಅಥವಾ ತೂಗು ಹಾಕಿರುವುದನ್ನು ನಾವು ನೋಡುತ್ತೇವೆ. ಇವುಗಳಿಗೆ ಅನುಕ್ರಮವಾಗಿ Show card ಹಾಗೂ Wall hangings ಎಂದು ಹೇಳುತ್ತಾರೆ.

ಇನ್ನೂ ಹೊರಾಂಗಣ ಜಾಹೀರಾತುಗಳಲ್ಲಿ Poster Design ಅಂದರೆ ಭಿತ್ತಿಚಿತ್ರ ವಿನ್ಯಾಸ ಮುಖ್ಯವಾಗಿ ಕಾಣುತ್ತೇವೆ. ಇದನ್ನು ಸಾಮಾನ್ಯವಾಗಿ ರಸ್ತೆಯ ಪಕ್ಕದಲ್ಲಿ ಅಳವಡಿಸಿದ್ದನ್ನು ಹಾಗೂ ಗೋಡೆಗಳಿಗೆ ಅಂಟಿಸಿದ್ದನ್ನು ನೋಡಬಹುದು. ಹೆದ್ದಾರಿಗಳ ಪಕ್ಕದಲ್ಲಿ ವೃತ್ತಗಳಲ್ಲಿ ಅಥವಾ ಯಾವುದೇ ರಸ್ತೆಯ ಬದಿಯಲ್ಲಿ ಜನನಿಬಿಡದ ಸ್ಥಳಗಳಲ್ಲಿ ಕೂಡ ಅತಿದೊಡ್ಡ ಪ್ರಮಾಣದ ಬೋರ್ಡ್‌ಗಳನ್ನು ಅಳವಡಿಸಿ ಅವುಗಳ ಮೇಲೆ ಅತಿ ದೂರದಿಂದಲೇ ಕಾಣಿಸಿಕೊಳ್ಳುವ ಜಾಹೀರಾತಿನ ಒಂದು ಪ್ರಕಾರವನ್ನು ನೋಡುತ್ತೇವೆ. ಇವಕ್ಕೆ Hordings ಎಂದು ಹೆಸರು. ದಿನಾಲು ಕೆಲಸಕ್ಕೆ ಹೋಗುವಾಗ ಪೇಟೆಗೆ ಹೋಗುವಾಗ ಮೇಲಿಂದ ಮೇಲೆ ಅನಾಯಾಸವಾಗಿ ಕಣ್ಣಿಗೆ ಬೀಳುವುದರಿಂದ ಹೆಚ್ಚು ನೆನಪಿನಲ್ಲಿ ಉಳಿಯುವ ಮಾಧ್ಯಮ ಇದಾಗಿರುವುದರಿಂದ ಇಂತಹ ಹೊರಾಂಗಣ ಜಾಹೀರಾತು ಹೆಚ್ಚು ಪ್ರಚಲಿತವಾಗಿದೆ. ಇವು ಕನಿಷ್ಠ ೪ ರಿಂದ ೧೦ ಅಡಿಗಳಷ್ಟು ದೊಡ್ಡವಾಗಿರುವುದರಿಂದ ಕೇವಲ ನಡೆದುಕೊಂಡು ಹೋಗುವವರಿಗೆ ಅಷ್ಟೇ ಅಲ್ಲ, ವಾಹನಗಳ ಮೇಲೆ ತೀವ್ರವಾಗಿ ಓಡಾಡುವ ಜನರ ಗಮನವನ್ನು ಸೆಳೆಯುವ ಸಾಮರ್ಥ್ಯವನ್ನು ಹೊಂದಿರುತ್ತದೆ.

ಒಂದು ವಸ್ತುವಿನ ಮಾರಾಟದ ಬೆಲೆಯನ್ನು ನಿಗದಿಪಡಿಸುವಲ್ಲಿ ಜಾಹೀರಾತಿನ ಖರ್ಚು ಅದರಲ್ಲಿ ಸೇರಬೇಕಾಗುವುದರಿಂದ ಜಾಹೀರಾತಿನಿಂದ ವಸ್ತುವಿನ ಮಾರುಕಟ್ಟೆ ಬೆಲೆ ಹೆಚ್ಚಾಗುತ್ತದೆ ಎನ್ನುವುದಂತೂ ಸತ್ಯ.

ಆದರೆ ಜಾಹೀರಾತು ಇಲ್ಲದೆ ವಸ್ತುವಿನ ಮಾರಾಟವೇ ಸಾಧ್ಯವಿಲ್ಲ ಎನ್ನುವ ಸ್ಥಿತಿ ತಲುಪಿದೆ. ಎರಡು ಕಂಪನಿಗಳು ಒಂದೇ ತರಹದ ವಸ್ತುಗಳನ್ನು ತಯಾರಿಸುತ್ತಿದ್ದರೆ ಯಾರೂ ಹೆಚ್ಚು ಜಾಹೀರಾತು ಮಾಡುತ್ತಾರೋ ಅವರ ವಸ್ತುಗಳೇ ಹೆಚ್ಚು ಮಾರಾಟವಾಗುತ್ತವೆ ಎನ್ನುವ ಮಾತು ಸಿದ್ಧವಾಗಿದೆ. ದಿನೇ ದಿನೇ ಭೇಟಿಯಾಗುವ ವ್ಯಕ್ತಿಯ ಜೊತೆಗೆ ಅನಾಯಾಸವಾಗಿ ಗೆಳೆತನ ಬೆಳೆಯುವಂತೆ ಮೇಲಿಂದ ಮೇಲೆ ಬೇರೆ ಬೇರೆ ಮಾಧ್ಯಮಗಳಿಂದ ಜಾಹೀರಾತಿನ ಮೂಲಕ ಒಂದು ವಸ್ತು ಕಣ್ಣಿಗೆ ಬೀಳುತ್ತಿದ್ದರೆ ವಸ್ತುವಿನ ಬಗ್ಗೆ ಒಂದು ಬಗೆಯ ಮೈತ್ರಿಭಾವ ತಾನಾಗಿಯೇ ಹುಟ್ಟಿಕೊಳ್ಳುತ್ತದೆ. ಜಾಹೀರಾತಿಗೆ ಖರ್ಚು ಮಾಡದೆ ಅಷ್ಟು ಬೆಲೆಯನ್ನು ಕಡಿಮೆಮಾಡಿ ಮಾರಾಟಕ್ಕೆ ಇಟ್ಟರೆ ಜನ ಕಡಿಮೆ ಬೆಲೆಯಲ್ಲಿ ಅಂತಹ ವಸ್ತುಗಳನ್ನು ಕೊಂಡುಕೊಳ್ಳುತ್ತಾರೆ ಎನ್ನುವ ಭರವಸೆಯೇ ಇಲ್ಲ.

ವಸ್ತುವಿನ ಗುಣಮಟ್ಟವನ್ನು ಕಾಪಾಡಿಕೊಂಡು ಮಾರಾಟದ ಬೆಲೆಯನ್ನೂ ಕಡಿಮೆಯಾಗಿರಿಸಿಕೊಂಡು ಜಾಹೀರಾತುಗಳನ್ನು ಹೆಚ್ಚಾಗಿ ಮಾಡಿಕೊಂಡು ಬರುವ ವಸ್ತು ಮಾರಾಟದಲ್ಲಿ ದಾಖಲೆಯನ್ನೆ ಸ್ಥಾಪಿಸಬಹುದು ಎನ್ನುವುದರಲ್ಲಿ ಸಂದೇಹವೇ ಇಲ್ಲ. ಇದೇ ಸ್ಪರ್ಧಾತ್ಮಕ ಮಾರುಕಟ್ಟೆಯ ಗುಣ ಹಾಗೂ ಯಶಸ್ಸು ಎಂದು ಹೇಳಬಹುದು. ಹೆಚ್ಚು ಬೆಲೆಯ ಉತ್ತಮ ಗುಣಮಟ್ಟದ ವಸ್ತುಗಳು ಈಗ ಮಾರುಕಟ್ಟೆಯಲ್ಲಿ ಹೆಚ್ಚು ಮಾರಾಟವಾಗುತ್ತಿರುವುದನ್ನು ಗಮನಿಸಿದರೆ ಕೊಂಡುಕೊಳ್ಳುವವರು ಇತ್ತೀಚೆಗೆ ವಸ್ತುವಿನ ಬೆಲೆಯ ಬಗ್ಗೆ ಗಮನಿಸುವುದು ಕಡಿಮೆಯಾಗಿದೆ ಎಂಬುದು ತಿಳಿದುಬರುತ್ತದೆ. ಇಂದು ಮಾರುಕಟ್ಟೆಯಲ್ಲಿ ವಸ್ತುವಿನ ಮಾರಾಟದ ಬೆಲೆ ಮುಖ್ಯವಾಗಿರದೆ ಆ ವಸ್ತು ಎಷ್ಟು ಪ್ರಚಾರದಲ್ಲಿದೆ, ಹೆಸರು ಮಾಡಿದೆ ಹಾಗೂ ಜನಪ್ರಿಯವಾಗಿದೆ ಎನ್ನುವುದರ ಮೇಲೆ ಅದರ ಮಾರಾಟವಾಗುತ್ತದೆ. ಇದೇ ಜಾಹೀರಾತುಗಳ ಮುಖ್ಯ ಉದ್ದೇಶ. ಹಾಗಾಗಿ ಇಂದಿನ ಮಾರುಕಟ್ಟೆ ಜಾಹೀರಾತುಗಳಿಲ್ಲದೆ ನಡೆಯುವುದೇ ಇಲ್ಲ ಎನ್ನುವ ಮಟ್ಟಕ್ಕೆ ತಲುಪಿದೆ ಎಂದರೆ ಅತಿಶಯೋಕ್ತಿ ಏನಲ್ಲ.

ಮಾಧ್ಯಮಗಳನ್ನು ಪರಿಚಯಿಸಿ ಅಂತಹ ವಿನ್ಯಾಸ ರಚನೆಯ ಬಗ್ಗೆ ಹೇಳಿಕೊಡಲಾಗುತ್ತದೆ. ಆದ್ದರಿಂದ ಈ ವಿಷಯ ಹಾಗೂ ಮಾರ್ಗದಲ್ಲಿ ಆಯ್ದು ಬಂದವರು ಸಫಲತೆಯನ್ನು ಪಡೆಯುತ್ತಾರೆ ಎನ್ನುವುದನ್ನು ಒಪ್ಪಿಕೊಂಡರೂ ಕಲಾವಿದ ಎಂದೆನಿಸಿಕೊಳ್ಳಲು ಯೋಗ್ಯತೆಯನ್ನು ಪಡೆದಬಣ್ಣ ಹಾಗೂ ರೇಖೆಗಳಿಂದ ಸುಂದರವಾದ ಜನಮೆಚ್ಚುಗೆ ಪಡೆಯುವಂತಹ ಗುಣಮಟ್ಟದಲ್ಲಿ ಚಿತ್ರ ರಚಿಸಬಲ್ಲ. ಸುಂದರ ವಿನ್ಯಾಸಗಳನ್ನು ರೂಪಿಸಬಲ್ಲ. ಪ್ರತಿಯೊಬ್ಬನು ಈ ವಿಭಾಗದಲ್ಲಿ ಕೆಲಸ ಮಾಡಬಲ್ಲ. ಒಳ್ಳೆಯ ಹೆಸರನ್ನೂ ಮಾಡಬಲ್ಲ ಎನ್ನುವುದಂತೂ ಸತ್ಯ. ಇಂದು ಚಿತ್ರಕಲಾ ಕಾಲೇಜುಗಳಲ್ಲಿ ನವ್ಯದ ಹೆಸರಿನಲ್ಲಿ ಸಮಕಾಲೀನರ ಹೆಸರಿನಲ್ಲಿ ಅಮೂರ್ತ ಕಲೆಯ ಹೆಸರಿನಲ್ಲಿ ಪ್ರಯೋಗಗಳು ನಡೆಯುತ್ತಿರುವುದನ್ನು ನಾವು ನೋಡುತ್ತೇವೆ. ಬೇಗ ಬೇಗ ಪ್ರದರ್ಶನಗಳನ್ನು ಮಾಡಬೇಕು. ಹೆಸರು ಮಾಡಬೇಕು ಎನ್ನುವ ಆತುರತೆಯಲ್ಲಿ ಯುವಕರು ತವಕ ಪಡುತ್ತಿರುವುದನ್ನು ನಾವು ನೋಡುತ್ತೇವೆ. ಆದರೆ ಅನುಭವಿಕ ಮನಸ್ಸು ಹಾಗೂ ಪಳಗಿದ ಕಣ್ಣುಗಳು ಮಾತ್ರ ಗುಣಮಟ್ಟವನ್ನು ಗುರುತಿಸಲು ಸಾಧ್ಯ. ಈ ನವ್ಯದ ಪ್ರಯತ್ನ ಸ್ವಂತಿಕೆಯ ಭಾವ ಪ್ರದರ್ಶನ ಮಹದಾಸೆಯಲ್ಲಿ ನಡೆಯುವಂಥದ್ದು. ಕಲೆ

ಮುಖ್ಯವಾಗಿ ಪ್ರಯೋಜಕತೆಯ ದೃಷ್ಟಿಯಿಂದ ಕರಕುಶಲಕಲೆ ಜನರ ಮೆಚ್ಚುಗೆಯನ್ನು ಪಡೆಯುವ ಉದ್ದೇಶ ಹೊಂದಿರುತ್ತದೆ ಎನ್ನುವುದನ್ನು ಮರೆಯುವಂತಿಲ್ಲ. ಇಂತಹ ಉದ್ದೇಶವನ್ನು ಪೂರೈಸಬಲ್ಲ ಎಲ್ಲ ಕಲೆಯೂ ಇಲ್ಲಿ ಪ್ರಯೋಜಕತೆಯನ್ನು ಪಡೆಯುತ್ತದೆ ಎಂದು ಹೇಳಬಹುದು.

ಚನ್ನಪಟ್ಟಣದ ಪ್ರದೇಶ ಒಂದೇ ಅಲ್ಲದೇ ಈ ತಾಲೂಕಿನ ಸುತ್ತಮುತ್ತಲ ಈ ವೃತ್ತಿಯನ್ನು ಅವಲಂಬಿಸಿ ಬದುಕಿದ ಕುಟುಂಬಗಳು ೩೦೦೦ದಿಂದ ೫೦೦೦ ಕರಕುಶಲ ಕರ್ಮಿಗಳು ಇದ್ದಾರೆ. ಇದೇ ರೀತಿಯಾಗಿ ಹಿಂದಿನ ಸಮೀಕ್ಷೆಯಂತೆ ೮೦೦೦ ದಿಂದ ೧೦೦೦೦ಕ್ಕೆ ಹೆಚ್ಚು ಜನರು ಈ ವೃತ್ತಿಯನ್ನು ಅವಲಂಬಿಸಿಕೊಂಡು ತಮ್ಮ ಜೀವನ ಸಾಗಿಸುತ್ತಿದ್ದರು. ಆದರೆ ಆ ದಿನಗಳಲ್ಲಿ ೧೦ ರೂಪಾಯಿಗಳಿಗೆ ಮುಕ್ಕಾಲು ಕೆ.ಜಿ. ಬಣ್ಣ ಹಾಗೂ ಜಿಂಕ್ ಪೌಡರ್ ದೊರೆಯುತ್ತಿತ್ತು. ಮತ್ತು ೨೫ ರಿಂದ ೨೬ ರೂ. ಒಂದು ಮಣ ಹಾಲೆ, ಮರ ದೊರಕುತ್ತಿತ್ತು. ಆದರೆ ಈಗ ಇದರ ಬೆಲೆ ಹೆಚ್ಚಾಗಿದೆ. ಈ ವೃತ್ತಿಯನ್ನು ಮಧ್ಯಮ ಜನರೆ ಹೆಚ್ಚಾಗಿ ಅವಲಂಭಿಸಿರುವುದರಿಂದ ಕಲಾವಿದರ ಆರ್ಥಿಕ ಪರಿಸ್ಥಿತಿಯು ಅಷ್ಟರಮಟ್ಟಿಗೆ ಸುಧಾರಿಸಿಲ್ಲ. ಮನೆಯಲ್ಲಿ ಎಲ್ಲಾ ಸದಸ್ಯರು ಸೇರಿ ಇಡೀ ಗೊಂಬೆಯ ತಯಾರಿಕೆಯ ಕೆಲಸ ಮಾಡಿದರೆ ಸ್ವಲ್ಪ ಮಟ್ಟಿಗೆ ಲಾಭಗಳಿಸಲು ಸಾಧ್ಯವಾಗುತ್ತಿದೆ. ಇನ್ನು ಕೆಲವು ಕುಟುಂಬಗಳು ಸುಧಾರಿಸಲು ಹೆಚ್ಚು ಎಂದರೆ ೧೦ನೇ ತರಗತಿ ಮಾತ್ರ ಓದಿದ್ದಾರೆ. ಕುಟುಂಬವೊಂದರಲ್ಲಿ ತಂದೆಯೊಬ್ಬನೆ ದುಡಿದರೆ ತಮ್ಮ ಜೀವನದಲ್ಲಿ ಬರುವ ಹಣವು ಸಾಕಾಗುತ್ತಿಲ್ಲ. ಅಲ್ಲದೇ ತಮ್ಮ ವಿದ್ಯಾಭ್ಯಾಸವನ್ನು ಅರ್ಧಕ್ಕೆ ನಿಲ್ಲಿಸಿ ಈ ವೃತ್ತಿ ಜೀವನದ ಕಡೆಗೆ ತಮ್ಮನ್ನು ಹಾಗೂ ತಮ್ಮ ಕುಟುಂಬದ ಎಲ್ಲಾ ಸದಸ್ಯರಗಳನ್ನು ಈ ಕೆಲಸಕ್ಕೆ ತೊಡಗಿಸಿಕೊಳ್ಳುತ್ತಿದ್ದಾರೆ.

ಗೊಂಬೆಯ ತಯಾರಿಕೆ ಪ್ರಪ್ರಥಮವಾಗಿ ಕರಕುಶಲಕರ್ಮಿ ನಂತರ ಮಧ್ಯವರ್ತಿ(ಬ್ರೋಕರ್) ಕೊನೆಯದಾಗಿ ಅಂಗಡಿ ಮಾಲಿಕ ಅಥವಾ ಎಂಪೋರಿಯಂಗಳು. ಇಲ್ಲಿ ಪ್ರಥಮವಾಗಿ ತಯಾರಿಸುವ ಕಲಾವಿದನಿಗೆ ಗೊಂಬೆ ತಯಾರಿಕೆಗೆ ಬೇಕಾಗುವಂತಹ ವಸ್ತು ಮರ, ಆ ಮರವನ್ನು ಯಂತ್ರಕ್ಕೆ ಕೊಟ್ಟು ಅದನ್ನು ಗೊಂಬೆ ತಯಾರಿಕೆಯ ಕೆಲಸಕ್ಕೆ ಸೂಕ್ತ ರೀತಿಯಲ್ಲಿ ಹದ ಮಾಡಿಕೊಂಡು ನಂತರ ಇದಕ್ಕೆ ಬೇಕಾಗುವ ಬಣ್ಣವನ್ನು ಮತ್ತು ವಿದ್ಯುತ ಚಾಲಿತ ಯಂತ್ರದ, ವಿದ್ಯುತ್ ಬಿಲ್ಲು, ಇದನ್ನೆಲ್ಲ ತಾನು ತಯಾರಿಸುವ ಗೊಂಬೆಗಳನ್ನು ಮಾರಾಟ ಮಾಡಿ ಈ ಎಲ್ಲಾ ಖರ್ಚುಗಳನ್ನು ಬಂದ ಹಣದಲ್ಲಿಯೇ ವ್ಯಯಿಸಿದ ಖರ್ಚನ್ನು ತೆಗೆದು ತನ್ನ ಜೊತೆಯಲ್ಲಿಯೇ ದಿನ ಕೂಲಿಯಂತೆ ಕೆಲಸ ಮಾಡಿದ ಕರಕುಶಲಕರ್ಮಿಗಳಿಗೆ ದಿನಗೂಲಿಯಂತೆ ಹಣವನ್ನು ಕೊಡಬೇಕಾಗುತ್ತದೆ. ಇದನ್ನೆಲ್ಲ ಖರ್ಚನ್ನು ತೆಗೆದು ತನಗೆ ಉಳಿಯುವ ಹಣದಲ್ಲಿ ಜೀವನವನ್ನು ನಡೆಸುತ್ತಾನೆ.

ಆದರೆ ಮಧ್ಯವರ್ತಿಗೆ ಕಲಾವಿದನು ತಯಾರಿ ಮಾಡಿದ ಬೊಂಬೆಯನ್ನು ಕೊಂಡುಕೊಂಡು ತನ್ನ ಅರ್ಧ ಲಾಭಕ್ಕೆ ಇದನ್ನು ಅಂಗಡಿಗೆ ಇಲ್ಲವೇ ದೊಡ್ಡ ದೊಡ್ಡ ಎಂಪೋರಿಯಂಗಳಿಗೆ ಮಾರಾಟ ಮಾಡುತ್ತಾನೆ. ಇಲ್ಲಿ ಮಧ್ಯವರ್ತಿ ಯಾವುದೇ ರೀತಿಯಾದ ಬಂಡವಾಳವನ್ನು ಹಾಕಿರುವುದಿಲ್ಲ. ಇವನು ಎನಿಸ್ಟರೂ ಕೊಂಡುಕೊಳ್ಳುವಿಕೆ ಮತ್ತು ಅದನ್ನು ಮಾಲಿಕನಿಗೆ ಮಾರಾಟ ಮಾಡುವುದು. ಇದರಿಂದ ಅರ್ಧ ಲಾಭ ಮಧ್ಯವರ್ತಿಗೆ ಸಿಗುತ್ತದೆ.

ಇನ್ನೂ ಕೊನೆಯದಾಗಿ ಅಂಗಡಿ ಮಾಲಿಕ (ಎಂಪೋರಿಯಂ) ಮಧ್ಯವರ್ತಿಗಳಿಂದ ಖರೀದಿಸಿದ ಸಾಮಾನುಗಳನ್ನು ನೇರವಾಗಿ ತಾವು ನಿಗದಿಪಡಿಸಿದ ದರದಲ್ಲಿ ಇವುಗಳನ್ನು ಪ್ರವಾಸಿಗರಿಗೆ ಮಾರಾಟ ಮಾಡಲಾಗುತ್ತದೆ. ಇಲ್ಲಿ ಒಟ್ಟು ಗೊಂಬೆಗಳ ತಯಾರಿಸಿದಂತಹ ಕಲಾವಿದನಿಗೆ ತಾನು ಹಾಕಿದ ಬಂಡವಾಳ ಮತ್ತು ಬುದ್ಧಿವಂತಿಕೆ, ಜಾಣ್ಮೆಗೆ ಇದಕ್ಕೆಲ್ಲಾ ಸರಿಯಾದ ರೀತಿಯಲ್ಲಿ ಬೆಲೆ ಸಿಗುತ್ತಿಲ್ಲ. ಇಲ್ಲಿ ಒಟ್ಟಾರೆ ಹೆಚ್ಚಿನ ಲಾಭವನ್ನು ಇಲ್ಲಿ ಎಂಪೋರಿಯಂಗಳಿಗೆ ಹಾಗೂ ಮಧ್ಯವರ್ತಿಗಳಿಗೆ ಮಾತ್ರ ಹೆಚ್ಚಿನದಾಗಿ ಲಾಭದ ಹಣ ಸಿಗುತ್ತದೆ.

**ರಾಜ್ಯ ಸರ್ಕಾರದ ನೆರವು**

ಚನ್ನಪಟ್ಟಣದ ಬಣ್ಣದ ಗೊಂಬೆಗಳ ತಯಾರಿಕೆಯಲ್ಲಿ ಬಹಳ ಪ್ರಸಿದ್ಧಿಯನ್ನು ಪಡೆದಿವೆ. ಇಲ್ಲಿ ಕಲಾವಿದರು ತಮ್ಮ ಜಾಣ್ಮೆಯ ಕಲಾಕೌಶಲ್ಯವನ್ನು ಎತ್ತಿಹಿಡಿಯುವಲ್ಲಿ ತಮ್ಮ ಜೀವನವನ್ನು ಮುಡುಪಾಗಿ ಇಟ್ಟಿದ್ದಾರೆ. ಕೆಲವು ಜನ ಕಲಾವಿದರು ತಮ್ಮ ಕುಟುಂಬದಲ್ಲಿ ತಲಾತಲಾಂತರದಿಂದ ಬಂದ ಕಲೆಯನ್ನು ಮುಂದುವರಿಸಿಕೊಂಡು ಉಳಿಸಿ ಬೆಳೆಸುವಲ್ಲಿ ಶ್ರಮಿಸಿದ್ದಾರೆ.

ಕರಕುಶಲ ಕಲೆಗಾರಿಕೆಯು ಜನಪದ ಜೀವನದೊಂದಿಗೆ ಬೆಳೆದು ಬಂದ ಅಭಿವ್ಯಕ್ತಿ ಮಾಧ್ಯಮವಾಗಿದೆ. ಕನ್ನಡ ನಾಡಿನ ಚಿತ್ರಕಲಾ ಪರಂಪರೆಯು ಕುಶಲ ಕೈಗಾರಿಕೆಯೊಂದಿಗೆ ಅನುಗುಣವಾಗಿ ಬೆಳೆದುಬಂದಿದೆ. ಕುಶಲ ಕಲೆಗಾರಿಕೆಯು ನಿಂತ ನೀರಾಗದೇ ಸದಾ ಪ್ರವಹಿಸುವ ನದಿ ಎಂದರೂ ಸಲ್ಲುತ್ತದೆ. ಇಂತಹ ಕರಕುಶಲ ಕಲಾಕೃತಿಗಳ ವೈಶಿಷ್ಟ್ಯ ಪೂರ್ಣ ಘನತೆಯನ್ನು ಕರ್ನಾಟಕದ ಹಲವು ಭಾಗಗಳಲ್ಲಿ ಕಾಣುತ್ತೇವೆ.

**ರಾಜೀವಗಾಂಧಿ ಶಿಲ್ಪಿ ಸ್ವಾಸ್ಥ್ಯ ವಿಮಾ ಯೋಜನೆ**

ಭಾರತ ಸರ್ಕಾರ ಜವಳಿ ಮಂತ್ರಾಲಯದ ಕರಕುಶಲ ಅಭಿವೃದ್ಧಿ ಆಯುಕ್ತರ ಕಛೇರಿಯು ಐ.ಸಿ.ಐ.ಸಿ.ಐ. ಲೋಂಬಾರ್ಡ್ ಜನರಲ್ ವಿಮಾ ಕಂಪನಿಯ ಸಹಯೋಗದಲ್ಲಿ ಕುಶಲ ಕರ್ಮಿಗಳ ಹಾಗೂ ಅವರ ಕುಟುಂಬದ ಕಲ್ಯಾಣಕ್ಕಾಗಿ ಸಮಗ್ರ ಆರೋಗ್ಯ ವಿಮಾ ಯೋಜನೆಯನ್ನು ರಾಷ್ಟ್ರ ವ್ಯಾಪ್ತಿ ಜಾರಿಗೊಳಿಸಿದೆ.

ಕುಶಲಕರ್ಮಿ, ಪತಿ ಪತ್ನಿ ಮತ್ತು ಅವರ ಇಬ್ಬರು ಮಕ್ಕಳು ಅಥವಾ ತಂದೆ ತಾಯಿ, ನಾಲ್ಕು ಜನ ಹೊರ ಮತ್ತು ಒಳರೋಗಿಯಾಗಿ ಚಿಕಿತ್ಸೆ ಪಡೆದರೆ ವಾರ್ಷಿಕ ರೂ. ೧೫,೦೦೦ ಗಳವರೆಗೆ ಗರಿಷ್ಠ ವೆಚ್ಚವನ್ನು ಮರುಪಾವತಿಸಲಾಗುವುದು. ಕುಶಲಕರ್ಮಿ ಅಪಘಾತದಿಂದಾಗಿ ಮರಣಹೊಂದಿದರೆ, ಶಾಶ್ವತವಾಗಿ ಊನವಾದರೆ

ವಾರ್ಷಿಕ ಪ್ರೀಮಿಯಂ ರೂ. ೬೦೦ ಗಳ ಸಾಮಾನ್ಯ ವರ್ಗಕ್ಕೆ ಸೇರಿದ ಕುಶಲಕರ್ಮಿಯು ನೀಡಬೇಕಾದ ಹಣ ರೂ. ೧೫೦ಗಳ ಎಸ್.ಸಿ., ಎಸ್.ಟಿ. ಹಾಗೂ ಬಿಪಿಎಲ್ ಪಡಿತರ ಚೀಟಿ ಹೊಂದಿರುವವರು ರೂ. ೭೫ ಗಳ ಮಾತ್ರ ಸಂದಾಯ ಮಾಡಬೇಕು. ಉಳಿದ ಹಣವನ್ನು ಕೇಂದ್ರ ಸರ್ಕಾರವು ವಿಮಾ ಕಂಪನಿಗೆ ಸಂದಾಯ ಮಾಡುತ್ತದೆ.

**ಮಾರಾಟ ವ್ಯವಸ್ಥೆ**

ಚನ್ನಪಟ್ಟಣದಲ್ಲಿ ಬೊಂಬೆಗಳನ್ನು ಮಾರಾಟ ಮಾಡಲು ಅನೇಕ ದೊಡ್ಡ ದೊಡ್ಡ ಎಂಪೋರಿಯಂಗಳನ್ನು ಮೈಸೂರು ರಸ್ತೆಯಲ್ಲಿ ಕಾಣಸಿಗುತ್ತವೆ. ಇಲ್ಲಿ ತಯಾರು ಮಾಡಿದಂತೆ ಬೊಂಬೆಗಳನ್ನು ಕೆಲವು ಕರಕುಶಲ ಕರ್ಮಿಗಳು ದಿನವು ತಾವು ಮಾರಾಟಮಾಡುತ್ತಾರೆ. ಇದಲ್ಲದೆ ಮೈಸೂರು ಬೆಂಗಳೂರು ವಿವಿಧ ಪ್ರವಾಸಿ ತಾಣಗಳಿಗೆ ಮಾರಾಟ ಮಾಡುವ ಮಾರಾಟಗಾರರಿಗೆ ಸರಬರಾಜು ಮಾಡುವವರು ಚನ್ನಪಟ್ಟಣದ ನಗರದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುತ್ತಾರೆ.

ಚನ್ನಪಟ್ಟಣದ ಕರಕುಶಲಕರ್ಮಿಗಳು ಗೊಂಬೆಗಳನ್ನು ತಯಾರಿಸುತ್ತಾರೆ. ಎರಡು ರೀತಿಯಾಗಿ ಗೊಂಬೆಗೆ ತಯಾರಾಗಲು ಬೇಕಾಗುವಂತಹ ಬಿಡಿ ಭಾಗಗಳನ್ನು ತಯಾರಿಸಿ ಅವುಗಳ ಜೋಡಣೆಯನ್ನು ಪೂರ್ಣಗೊಳಿಸುವಂತ ಕೆಲ ಕರಕುಶಲಕರ್ಮಿಗಳನ್ನು ಇಲ್ಲಿ ನೋಡಬಹುದು.

೧. ಒಂದು ಮೊಲವನ್ನು ತಯಾರಿಸಲು ಬೇಕಾಗುವ ಕಿವಿ, ಕಾಲು ಇತ್ಯಾದಿ.

೨. ಹಸುವಿಗೆ ಕೋಡು, ಕಿವಿ, ಕಾಲು, ಬಾಲ

೩. ನೀರು ತರುತ್ತಿರುವ ಮಾಡಿ ಗೊಂಬೆಗೆ ಕೊಡ, ಕೈಗಳು, ಕಿವಿ, ಹಿಂಬದಿಗೆ ತುರುಬು ಇನ್ನು ಹತ್ತು ಹಲವು ರೀತಿಯ ಬಿಡಿ ಭಾಗಗಳನ್ನು ಮಾಡಿ ಒಟ್ಟಾರೆ ಒಂದು ಪೂರ್ಣವಾದ ಗೊಂಬೆಯನ್ನು ತಯಾರಿಸು ವಂತವರನ್ನು ಸಹ ಇಲ್ಲಿ ಕಾಣಬಹುದಾಗಿದೆ.

ಇಲ್ಲಿ ಕರಕುಶಲಕರ್ಮಿಗಳು ಕೆಲವು ಬಿಡಿ ಭಾಗಗಳನ್ನು ಮಾತ್ರ ತಯಾರಿಸುತ್ತಾರೆ. ಉದಾಹರಣೆಗೆ ಗೊಂಬೆಗಳ ಕೈಗಳು, ಕಿವಿಗಳು, ರೈಲು ಗಾಲಿಗಳನ್ನ, ಪಕ್ಷಿಗಳ ವಿವಿಧ ರೀತಿಯ ಕೊಕ್ಕು ಇನ್ನೂ ಅನೇಕ ಸಣ್ಣಪುಟ್ಟ ಜೋಡಣೆಗೆ ತಯಾರಾದ ಗೊಂಬೆಗಳನ್ನು ಮತ್ತು ಬಿಡಿ ಭಾಗಗಳನ್ನು ನೇರವಾಗಿಯೇ ಹೋಗಿ ಅಂಗಡಿಗಳಿಗೆ ಹಾಕುತ್ತಾರೆ. ಇಲ್ಲಿ ಮಧ್ಯವರ್ತಿಗಳು ಕೆಲವು ಬಿಡಿ ಭಾಗಗಳನ್ನು ಸಂಗ್ರಹಿಸಿ ಇವುಗಳನ್ನು ದಿನಕೂಲಿಯ ದರದಲ್ಲಿ ಇವುಗಳ ಜೋಡಣೆಯನ್ನು ಮಾಡಿಸಿ ಅಲ್ಲದೆ ಪೂರ್ಣಗೊಂಡಂತಹ ಗೊಂಬೆಗಳನ್ನು, ಆಟಿಕೆಗಳು ಇತ್ಯಾದಿಗಳನ್ನು ಸಹ ಖರೀದಿಸಿ ಭಾರತವಲ್ಲದೆ ನೆರೆ ರಾಷ್ಟ್ರಗಳಾದ ಜಪಾನ್, ಅಮೆರಿಕಾ, ಜರ್ಮನ್, ಚೈನಾ, ಇನ್ನು ಹಲವು ಸ್ಥಳಗಳಿಗೆ ರಫ್ತು ಮಾಡಲಾಗುತ್ತದೆ.

ಗೊಂಬೆಗಳ ಚೆಲುವಿನ ಬೀಡಾದ ಚೆನ್ನಪಟ್ಟಣದ ಗೊಂಬೆಯು ಪ್ರಚಲಿತ ವಿಶ್ವದ ತುಂಬೆಲ್ಲಾ ಹರಡಿ, ಮೊದಲು ಗೊಂಬೆಯ ಸಂಗ್ರಹ ಮನೆ ಮನೆಗೆ ಸೀಮಿತವಾಗಿತ್ತು. ಆದರೆ ಇವೀಗ ದೇಶದ ತುಂಬೆಲ್ಲಾ ಗೊಂಬೆ ಸಂಗ್ರಹಾಲಯಗಳು ಮೈದಳೆಯ ತೊಡಗಿವೆ.

ಈ ಶತಮಾನದ ಮಾನವನ ಚಾಣಾಕ್ಷತೆಯು ಅತ್ಯದ್ಭುತ ಪ್ರತೀಕ ಪಾಶ್ಚಾತ್ಯರು ಔದ್ಯೋಗಿಕರಣಕ್ಕೆ ಅತ್ಯಂತ ಪ್ರಭಾವಿತರಾಗಿ ಅವಲಂಬಿತರಾದವರು. ಅದರ ಪರಿಣಾಮವಾಗಿ ಇವೀ ಜಗತ್ತಿಗೆ ಈ ಹೊಸ ಮಾಧ್ಯಮದ

ಪರಿಚಯವಾಯಿತು. ಎಲ್ಲದಕ್ಕೂ ಅದರದ್ದೆ ಆದಂತಹ ಸಾಧ್ಯತೆ ಮತ್ತು ಅಸಾಧ್ಯತೆಗಳಿರುತ್ತವೆ. ಹೀಗೆ ಒಂದೇ ನಾಣ್ಯದಲ್ಲಿ ಎರಡು ಮುಖಗಳಿರುತ್ತವೆ. ಕಂಪ್ಯೂಟರ್ ಕೂಡಾ ಇದಕ್ಕೇನೂ ಹೊರತಲ್ಲ. ಕ್ಯಾಲಕ್ಯೂಲೇಟರ್ ಕೂಡ ಇದರದ್ದೇ ಅವಿಭಾಜ್ಯ ಅಂಗ. ಕ್ಯಾಲಕ್ಯೂಲೇಟರ್‌ನ ಜ್ಞಾಪಕಶಕ್ತಿ, ಸ್ಥಳವಕಾಶ, ತಂತ್ರಜ್ಞಾನ ಬಹಳ ಕಡಿಮೆ ಇತ್ತು. ಇದರ ತದನಂತರ ಸುಧಾರಿತ ಅವಿಷ್ಕಾರವೇ ಕಂಪ್ಯೂಟರ್ ಇದನ್ನು ಹೆಚ್ಚು ತಂತ್ರಜ್ಞಾನದಿಂದ ನವೀಕರಿಸಿ ಪ್ರಸ್ತುತ ಪಡಿಸಲಾಗಿದೆ.

ಔದ್ಯೋಗಿಕರಣ ಪ್ರಬಲವಾದ ಪ್ರಭಾವದಿಂದ ಜಾಗತಿಕ ಮಟ್ಟದಲ್ಲಿ ಅನೇಕ ಬದಲಾವಣೆಗಳಾದವು. ಯೂರೋಪಿಯನ್ ಕಲೆಯಲ್ಲಿ ಕೂಡ ಮಹತ್ತರವಾದ ಬದಲಾವಣೆ ಕಾಣಿಸಿತು. ಈ ಪ್ರಭಾವದಿಂದಾಗಿ ವಸ್ತು ಮತ್ತು ತಂತ್ರಜ್ಞಾನ ಪಾತ್ರವಹಿಸುವುದು ಚಿತ್ರಕಲಾ ಜಗತ್ತಿನ ಅದರದೇ ಆದಂತಹ ವ್ಯಾಕರಣವನ್ನು ಮುರಿಯಲು ಮತ್ತು ಮುರಿದು ಕಟ್ಟುವ ಪ್ರಕ್ರಿಯೆ ಶುರುವಾಯಿತು. ಔದ್ಯೋಗಿಕರಣಕ್ಕೆ ಬೇಕಾಗಿರುವ ವಸ್ತುಗಳನ್ನು ಕಲೆಯಲ್ಲಿ ಬಳಸಿಕೊಳ್ಳಲು ಶುರುಮಾಡಿದರು. ಇದರ ಬದಲಾವಣೆಯು ಮೊಟ್ಟಮೊದಲು ಶಿಲ್ಪಕಲೆಗಳಿಂದ ಆಯಿತು. ನೆಲದ ಮೇಲೆ ಸ್ಥಾಪಿತವಾಗುವ ಶಿಲ್ಪಕಲೆಯನ್ನು ಪಾಶ್ಚಾತ್ಯ ಕಲಾವಿದನೊಬ್ಬ ನೆಲಬಿಟ್ಟು ತೆರೆದ ಅಕಾಶದಲ್ಲಿ ಆ ಶಿಲ್ಪಕಲೆಯನ್ನು ಮೇಲೆತ್ತಿ ಪ್ರದರ್ಶಿಸಿದ.

ಭಾರತದಲ್ಲಿ ಕಂಪ್ಯೂಟರ್ ಚಿತ್ರಕಲೆಯು ಪರಿಚಯವಾಗಿದ್ದು ಮುಂಬೈನಲ್ಲಿ. ಅದನ್ನು ಸೋನಲ್ ಜವೇರಿ, ಅಭಯ ಮಂಗಲದಾಸ್ ಪರಿಚಯಿಸಿದರು. ಜನೇ ಜನವರಿ ೧೯೯೧ರಲ್ಲಿ ಭಾರತದ ಕೆಲವು ಖ್ಯಾತ ಹಿರಿಯ ಹಾಗೂ ಕಿರಿಯ ಕಲಾವಿದರು ಮಾಧ್ಯಮವನ್ನು ಪರಿಚಯಿಸಿಕೊಂಡರು.

ಬೇಗ ಬೇಗನೆ ಬದಲಾವಣೆಯನ್ನು ಹೊಂದುತ್ತಿರುವ ತಂತ್ರಜ್ಞಾನದಲ್ಲಿ ಇಂಟರ್‌ನೆಟ್ ಸೌಲಭ್ಯವು ಒಂದಾಗಿದೆ. ಸೈಬರ್ ಸ್ಪೇಸ್‌ಗೆ ಹೋಗದೆ ಮನೆಯಲ್ಲಿಯೇ ದೂರವಾಣಿಯ ಮುಖಾಂತರ ಇಂಟರ್‌ನೆಟ್ ಸಂಪರ್ಕವನ್ನು ಹೊಂದಿರುವುದು ದೇಶದ ವಿವಿಧ ಮೂಲೆಯಲ್ಲಿ ನಡೆಯುವ ಚಿತ್ರಕಲಾ ಪ್ರದರ್ಶನಗಳನ್ನು ಕಲೆಗೆ ಸಂಬಂಧಿಸಿದ ವಿಷಯಗಳನ್ನು ಕೆಲವೇ ಇಂಗ್ಲೀಷ್ ಪದಗಳನ್ನು ಕಂಪ್ಯೂಟರ್‌ಗೆ ತಿಳಿಸುವ ಮೂಲಕ ಇಂಟರ್‌ನೆಟ್‌ನ್ನು ಪ್ರವೇಶಿಸಿ ಜಗತ್‌ಪ್ರಸಿದ್ಧ ಕಲಾವಿದರ ಕೃತಿಯಾಗಲಿ ಅವರ ಜೀವನ ಚರಿತ್ರೆಯಾಗಲಿ ಪ್ರಸಿದ್ಧ ಮ್ಯೂಸಿಯಂಗಳು, ಎಂಪೋರಿಯಂ, ವಿಮರ್ಶೆ, ಗ್ಯಾಲರಿಗಳಾಗಲಿ ಹೀಗೆ ಅನೇಕ ಇಂತಹ ಸೌಲಭ್ಯಗಳನ್ನು ಕಾಣಬಹುದಾಗಿದೆ. ಚನ್ನಪಟ್ಟದ ಗೊಂಬೆಗಳ ಜಾಗತಿಕ ಮಟ್ಟದಲ್ಲಿ ಚನ್ನಪಟ್ಟಣ ಕುಶಲಕಲೆಯೂ ಕೂಡ ಒಳಗೊಂಡಿದೆ. ಅಂತರ್ ಜಾಲದ ಸೌಲಭ್ಯದಿಂದ ಕೂಡಿದೆ.

ಮಾರಾಟ ಈ ಅನನ್ಯ ಲೋಕದ ಮುಖಾಂತರ ಕುಶಲ ಕಲಾಕೃತಿಯನ್ನು ಪ್ರದರ್ಶಿಸಿ ಪರಿಚಯಿಸಿಕೊಂಡು ಮಾರಾಟ ಸೌಲಭ್ಯವನ್ನು ಹೊಂದಿದೆ. ಚನ್ನಪಟ್ಟಣದ ಕಲಾಕೃತಿಯ ಪಾರದರ್ಶಿಕೆಗಳನ್ನು ವೆಬ್‌ಸೈಟುಗಳಲ್ಲಿ ಇಟ್ಟು ಆಗ ಕಲಾಕೃತಿಗಳನ್ನು ನೋಡಿ ನೇರವಾಗಿ ಯಾವುದೇ ಅಡಚಣೆ ಇಲ್ಲದೇ ಕೆಲವೇ ಬಟನ್ ಮುಖಾಂತರ ವೆಬ್‌ಸೈಟ್‌ನಲ್ಲಿ ಚನ್ನಪಟ್ಟಣದ ಕಲಾಕೃತಿಗಳನ್ನು ನೋಡಿ ಇಷ್ಟವಾದಲ್ಲಿ ಕ್ರೆಡಿಟ್ ಕಾರ್ಡ್‌ನ ಮುಖಾಂತರ

ಹಣತೆತ್ತು ಗೊಂಬೆಗಳನ್ನು ತರಿಸಿಕೊಳ್ಳಬಹುದು. ಚನ್ನಪಟ್ಟಣದ ಕೃತಿಯೇ ಬೇಕಾದಲ್ಲಿ ನೇರವಾಗಿ ಎಂಪೋರಿಯಂಗಳ ಸೈಟ್ ಮುಖಾಂತರ ಸಂಪರ್ಕಿಸಿ ಚೆಕ್ ಅಥವಾ ಕ್ರೆಡಿಟ್ ಕಾರ್ಡ್‌ನಿಂದ ಪಡೆದುಕೊಳ್ಳುವ ಅವಕಾಶವು ಸಹ ಚನ್ನಪಟ್ಟಣದ ಗೊಂಬೆಗಳನ್ನು ಕೊಂಡುಕೊಳ್ಳುತ್ತಾರೆ.

**ಸಮಸ್ಯೆಗಳು ಮತ್ತು ಪರಿಹಾರೋಪಾಯಗಳು**

ಕರ್ನಾಟಕ ರಾಜ್ಯ ಕರಕುಶಲ ಅಭಿವೃದ್ಧಿ ನಿಗಮವು ಚನ್ನಪಟ್ಟಣದ ಕಲಾಕಾರರಿಗೆ ನೆರವು ನೀಡಲು ಮುಖ್ಯವಾಗಿ ಅವರ ಉತ್ಪನ್ನಗಳನ್ನು ಕೊಂಡುಕೊಳ್ಳಲು ತನ್ನ ಕಛೇರಿಯೊಂದನ್ನು ತೆರೆದಿದೆ. ಹಾಗೆ ಕೊಂಡ ಕಲಾಕೃತಿಗಳನ್ನು ರಾಜ್ಯದಲ್ಲಿ ಮತ್ತು ಹೊರಗೆ ಕಾರ್ಯನಿರ್ವಹಿಸುತ್ತಿರುವುದನ್ನು ಕಾವೇರಿ ಮಾರಾಟ ಮಳಿಗೆಗಳ ಮೂಲಕ ಮಾರಾಟ ಮಾಡಲು ಕ್ರಮಕೈಗೊಳ್ಳಲಾಗಿದೆ. ಹಾಗೆಯೇ ಖಾಸಗಿ ಕರಕುಶಲ ವಸ್ತುಗಳ ಮಾರಾಟ ಮಳಿಗೆಗಳು ಅವುಗಳನ್ನು ಕೊಂಡುತಂದು ಮಾರಾಟ ಮಾಡುತ್ತಾರೆ.

**ಕಾವೇರಿ ಎಂಪೋರಿಯಮ್ ಕಲಾಕೃತಿಗಳನ್ನು ಕೊಳ್ಳುವುದು**

ಚಿತ್ರಗಾರರು ಕಲಾಕೃತಿಗಳ ತಯಾರಿಕೆಯಲ್ಲಿ ಗುಣಮಟ್ಟ ಕಾಯ್ದುಕೊಂಡು ಒಬ್ಬೊಬ್ಬರು ಒಂದೊಂದು ಕಲಾಕೃತಿಯ ತಯಾರಿಕೆಯಲ್ಲಿ ವಿಶೇಷ ಪರಿಣಿತಿಯನ್ನು ಗಳಿಸಿಕೊಂಡಿದ್ದಾರೆ. ಹಾಗಾಗಿ ಎಲ್ಲರಿಗೂ ಮಾರಾಟ ಸುಲಭವಾಗಿದೆ ಎಂಬುದು ಕಲಾವಿದರ ಅಭಿಪ್ರಾಯವಾಗಿದೆ. ಕರ್ನಾಟಕ ಸರ್ಕಾರವು ಚನ್ನಪಟ್ಟಣದ ಚಿತ್ತಾರದ ಗೊಂಬೆಗಳ ತಯಾರಿಸುವ ಕುಟುಂಬಗಳಿಗೆ ಕಾರ್ಯಾಗಾರ ಸಹಿತವಾದ ಮನೆಗಳನ್ನು ಕಟ್ಟಿಸಿಕೊಟ್ಟಿದೆ. ಕೇಂದ್ರ ಸರ್ಕಾರದ ಕರಕುಶಲ ಕಲೆಗಳ ಅಭಿವೃದ್ಧಿ ಕಮೀಷನರ್ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ದೇಶದ ಪ್ರಮುಖ ಪಟ್ಟಣಗಳಲ್ಲಿ ಆಯೋಜಿಸುವ ವಸ್ತು ಪ್ರದರ್ಶನಗಳಲ್ಲಿ ಚನ್ನಪಟ್ಟಣದ ಚಿತ್ತಾರದ ಗೊಂಬೆಗಳ ಕಲಾಕೃತಿಗಳ ಪ್ರದರ್ಶನ ಮತ್ತು ಮಾರಾಟಕ್ಕೆ ಅವಕಾಶ ಕಲ್ಪಿಸಿಕೊಡಲಾಗಿದೆ.

ರಾಜ್ಯ ಸರ್ಕಾವು ಚನ್ನಪಟ್ಟಣದ ಸಾಮಾನ್ಯ ಸೌಲಭ್ಯ ಕೇಂದ್ರವೊಂದನ್ನು ತೆರೆದು ಅಲ್ಲಿ ಅಗತ್ಯವಾದ ಯಂತ್ರೋಪಕರಣಗಳನ್ನು ಒದಗಿಸಿಕೊಟ್ಟಿದೆ. ಅವುಗಳನ್ನು ಅಲ್ಲಿ ಬಳಸಿಕೊಳ್ಳುತ್ತಿದ್ದಾರೆ. ಅವರು ಕಲಾಕೃತಿಗಳ ರಚನೆಗೆ ವಸ್ತು ಸುಲಭವಾಗಿ ದೊರಕುವುದರಿಂದ ಯಂತ್ರಗಳನ್ನು ಬಳಸಿಕೊಳ್ಳುತ್ತಿದ್ದಾರೆ. ಈ ಎಲ್ಲಾ ಸಮಸ್ಯೆಗಳ ಸುಳಿಯ ಮಧ್ಯದಲ್ಲೂ ಚನ್ನಪಟ್ಟಣ ಕಲಾಕೃತಿಗಳು ಜನರ ಮನಸ್ಸನ್ನು ಸೆಳೆಯುವಲ್ಲಿ ಸಫಲವಾಗಿವೆ.

**ತರಬೇತಿ :** ಚನ್ನಪಟ್ಟಣದ ಕಲೆಯನ್ನು ಉಳಿಸಿ ಬೆಳೆಸಿ ಅಭಿವೃದ್ಧಿ ಪಡಿಸಲು ತಮ್ಮ ಶಕ್ತಿ ಮೀರಿ ತರಬೇತಿ ಸಂಸ್ಥೆಗಳು ಪ್ರಯತ್ನಿಸುತ್ತಿವೆ.

## ಅಧ್ಯಾಯ ಆರು

# ಸಮಾರೋಪ

---

**ಕ**ಲೆ ಮತ್ತು ಕಲಾ ಪ್ರಕಾರಗಳು ಹಲವಾರು ರೀತಿಯಲ್ಲಿ ಮನುಷ್ಯನ ಮನಸ್ಸನ್ನು ರಂಜಿಸುತ್ತ ಬಂದಿವೆ. ಚಿತ್ರ, ಶಿಲ್ಪ, ನೃತ್ಯ, ಸಂಗೀತ ಹಾಗೂ ನಾಟಕದ ಮೂಲಕ ಹೀಗೆ ಅನೇಕ ಕಲಾ ಪ್ರಕಾರಗಳು ತಮ್ಮದೇ ಆದ ನಿಟ್ಟಿನಲ್ಲಿ ಸಂತೋಷವನ್ನು ಉಂಟುಮಾಡುವ ಹಿನ್ನೆಲೆ ಹೊಂದಿವೆ. ಇದರಲ್ಲಿ ಚಿತ್ರಕಲೆ ಮತ್ತು ಮೂರ್ತಿಕಲೆಗಳ ಸಂಗಮವಾದ ಗೊಂಬೆಗಳು ಕಲಾ ಪ್ರಕಾರದಲ್ಲಿ ವಿಶಿಷ್ಟಪಾತ್ರ ವಹಿಸುತ್ತವೆ. ಇಲ್ಲಿ ಗೊಂಬೆಗಳಲ್ಲಿ ಹಲವಾರು ರೀತಿಯ ಪ್ರಕಾರಗಳಿದ್ದು ತೊಗಲುಗೊಂಬೆ, ಸೂತ್ರದಗೊಂಬೆ, ಆಟಿಕೆಯ ಗೊಂಬೆ ಹೀಗೆ ವಿಂಗಡಿಸುತ್ತ ಹೋಗಬಹುದು. ಕೆಲವು ಗೊಂಬೆಗಳ ಪ್ರದರ್ಶನದ ಸಂದರ್ಭದಲ್ಲಿ ದೃಶ್ಯಾತ್ಮಕ ಮತ್ತು ಶ್ರವ್ಯ ಮಾಧ್ಯಮದ ಮೂಲಕ ಮನೋರಂಜನೆ ದೊರಕುತ್ತದೆ. ಆದರೆ ಆಟಿಕೆಯ ಗೊಂಬೆಗಳಿಂದ ಸೌಂದರ್ಯ ಮತ್ತು ಮಕ್ಕಳ ಮನೋವಿಕಾಸದಂತಹ ಚಟುವಟಿಕೆಗಳನ್ನು ಪೂರಕವಾಗಿ ಅವು ಬೆಳೆಸುತ್ತವೆ. ಈ ಹಿನ್ನೆಲೆಯಲ್ಲಿ ಚನ್ನಪಟ್ಟಣದ ಚಿತ್ತಾರದ ಗೊಂಬೆಗಳ ಕುರಿತಾದ ಪ್ರಸ್ತುತ ಅಧ್ಯಯನವು ವಿವಿಧ ಅಧ್ಯಾಯನಗಳಲ್ಲಿ ವಿಶ್ಲೇಷಣೆಗೊಂಡು ವಿಷಯ ನಿರೂಪಿಸಲ್ಪಟ್ಟಿದೆ ಇಲ್ಲಿ ಚರ್ಚಿತಗೊಂಡ ಸಂಗತಿಗಳು ಕೆಳಗಿನಂತಿವೆ.

ಪ್ರಸ್ತುತ ನಿಬಂಧದಲ್ಲಿ ಚನ್ನಪಟ್ಟಣದ ಸಾಂಸ್ಕೃತಿಕ ಪರಿಸರ ಮತ್ತು ಹಿನ್ನೆಲೆಗಳನ್ನು ಕುರಿತು ಹೇಳಲಾಗಿದೆ. ಇಲ್ಲಿ ಚೆನ್ನಪಟ್ಟಣದ ರಾಜಕೀಯ ಆಡಳಿತ ವ್ಯವಸ್ಥೆ, ಈ ಪ್ರದೇಶವನ್ನು ಆಳಿದ ಪ್ರಮುಖ ದೊರೆಗಳು ಅವರು

ನಿರ್ಮಿಸಿದ ಕಲಾತ್ಮಕ ದೇವಾಲಯ, ಮೂರ್ತಿ ಶಿಲ್ಪ, ಚಿತ್ರಕಲಾಕೃತಿಗಳು, ಈ ಭಾಗದ ಸಂಗೀತ, ಸಾಹಿತ್ಯ, ನೃತ್ಯ ಮತ್ತು ನಾಟಕದಂತಹ ಕಲಾ ಪ್ರಕಾರಗಳನ್ನು ಕುರಿತು ವಿವರಿಸಲಾಗಿದೆ. ಇವರ ಜೊತೆಗೆ ಚನ್ನಪಟ್ಟಣದ ಕಲಾತ್ಮಕ ಗೊಂಬೆಗಳ ತಯಾರಿಕೆಯ ಪರಂಪರೆಯೂ ಬೆಳೆದು ಬಂದ ಐತಿಹಾಸಿಕ ಹಿನ್ನೆಲೆಯನ್ನು ಕಟ್ಟಿಕೊಡಲು ಪ್ರಯತ್ನಿಸುವ ಮೂಲಕ ಚನ್ನಪಟ್ಟಣದ ಒಟ್ಟು ಕಲಾ ಹಿನ್ನೆಲೆಯನ್ನು ಬಿಂಬಿಸಲಾಗಿದೆ.

ಹಾಗೆಯೇ ಚನ್ನಪಟ್ಟಣದ ಬಣ್ಣದ (ಚಿತ್ತಾರದ) ಗೊಂಬೆಗಳ ಪರಿಕರಗಳು ಮತ್ತು ರಚನಾವಿಧಾನವನ್ನು ಕುರಿತು ಹೇಳಲಾಗಿದೆ. ಚನ್ನಪಟ್ಟಣದ ಗೊಂಬೆಗಳ ತಯಾರಿಕೆಯಲ್ಲಿ ಬೇಕಾಗುವ ಪರಿಕರಗಳನ್ನು ಎರಡು ರೀತಿಯಲ್ಲಿ ವಿಂಗಡಿಸಿಕೊಂಡು ಅಧ್ಯಯನ ಮಾಡಲಾಗಿದೆ. ಗೊಂಬೆಗಳಿಗೆ ಬೇಕಾಗುವ ರೋಸ್‌ವುಡ್, ಟೀಕ್‌ವುಡ್, ಸಿಲ್ವಾರ್ ಟ್ರೀ, ರೆಕ್‌ಸಿಟಾರಂ, ಸಾಗವಾನಿ ಮೊದಲಾದ ಮರಗಳು ಬಳಕೆಯಾಗುತ್ತಿದ್ದು, ಅತಿಹೆಚ್ಚು ಬಳಕೆಯಾಗುವುದು ಹಾಲೆಮರವಾಗಿದೆ. ಈ ಗೊಂಬೆಗಳಿಗೆ ವಿವಿಧ ರೀತಿಯ ಬಣ್ಣಗಳು, ಅಂಟು ದ್ರಾವಕಗಳನ್ನು ಬಳಸಿಕೊಂಡು ಕೆತ್ತುವ ಕೊರೆಯುವ ಮತ್ತು ನುಣುಪುಗೊಳಿಸುವ ಸಾಧನಗಳೊಂದಿಗೆ ಚನ್ನಪಟ್ಟಣದ ಚಿತ್ತಾರದ ಗೊಂಬೆಗಳನ್ನು ತಯಾರಿಸಲಾಗುತ್ತದೆ ಎಂಬುದನ್ನು ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.

ಈ ಎಲ್ಲಾ ಪರಿಕರಗಳನ್ನು ಬಳಸಿಕೊಂಡು ಗೊಂಬೆಗಳನ್ನು ತಯಾರಿಸುವುದು ಒಂದು ಕುತೂಹಲಕರವಾದ ಮತ್ತು ಶ್ರಮದಾಯಕವಾದ ಕೆಲಸವಾಗಿದೆ. ಈ ಗೊಂಬೆಗಳ ತಯಾರಿಕೆಯಲ್ಲಿ ಮುಖ್ಯವಾಗಿ ಆಕಾರಗಳನ್ನು ರೂಪಿಸುವುದು (ಕೆತ್ತುವುದು), ಬಣ್ಣ ತುಂಬುವುದು ಮತ್ತು ಪಾಲೀಶ್ ಮಾಡುವುದು ಈ ಮೂರು ಹಂತದಲ್ಲಿ ನಡೆಯುತ್ತದೆ ಈ ರೀತಿಯ ಕಠಿಣವಾದ ತಯಾರಿಕೆ ವಿಧಾನ ಇತ್ತೀಚಿಗೆ ಯಂತ್ರಗಳ ಸಹಾಯದಿಂದ ಬಹಳ ಬೇಗನೆ ಮತ್ತು ಹೆಚ್ಚಿನ ಶ್ರಮವಿಲ್ಲದೆ ನಡೆಯುತ್ತದೆ ಕೆತ್ತುವುದು, ಕೊರೆಯುವುದು, ಪಾಲೀಶ್ ಮಾಡುವುದು ಮುಂತಾದ ಎಲ್ಲಾ ವಿಧಾನಗಳನ್ನು ಆಧುನಿಕ ಯಂತ್ರಗಳ ಸಹಾಯದಿಂದ ಇತ್ತೀಚೆಗೆ ರಚನೆಮಾಡಲಾಗುತ್ತದೆ. ಹೀಗೆ ಚನ್ನಪಟ್ಟಣದ ಚಿತ್ತಾರದ ಗೊಂಬೆಗಳ ಪರಿಕರಗಳು ಮತ್ತು ರಚನಾ ವಿಧಾನಗಳನ್ನು ಪಾರಂಪರಿಕ ಹಿನ್ನೆಲೆಯ ಜೊತೆಗೆ ಆಧುನಿಕ ಸ್ವರೂಪದಲ್ಲಿಯೇ ಹೇಳಲಾಗಿದೆ.

ಪ್ರಸ್ತುತ ನಿಬಂಧದಲ್ಲಿ ಚನ್ನಪಟ್ಟಣದ ಚಿತ್ತಾರದ ಗೊಂಬೆಗಳ ವಸ್ತು ವೈವಿಧ್ಯತೆಯ ಬಗ್ಗೆ ಹೇಳಲಾಗಿದೆ. ರಚನೆಮಾಡುವ ಗೊಂಬೆಗಳಲ್ಲಿ ವಿವಿಧ ರೀತಿಯ ಮಾನವಾಕರಗಳು ಅದರಲ್ಲಿ ಸ್ತ್ರೀಪುರುಷರ ಗೊಂಬೆಗಳು ದೇವರುಗಳ ಗೊಂಬೆಗಳು, ಆನೆ, ನವಿಲು, ಚಿರತೆ, ನಾಯಿ, ಮಂಗ, ಹೀಗೆ ವೈವಿಧ್ಯಮಯ ಪ್ರಾಣಿಗಳು ಮತ್ತು ಪಕ್ಷಿಗಳು ಜೊತೆಗೆ ರೈಲು, ವಿಮಾನ, ಬಸ್ಸು, ಬ್ಯಾಟ್‌ಗಳು, ಟ್ರೋಫಿಗಳು, ಆಭರಣ ಪೆಟ್ಟಿಗೆಗಳು, ಮೇಣದ ಬತ್ತಿಯ ಸ್ಟ್ಯಾಂಡ್‌ಗಳು, ಶಾಲಾ ಕಲಿಕೆ ಸಾಮಗ್ರಿಗಳಲ್ಲದೆ ಇನ್ನೂ ಹತ್ತು ಹಲವು ಮಾದರಿಯ ಸಾಮಾನುಗಳು ತಯಾರಾಗುತ್ತವೆ ಎಂಬುದರ ಕುರಿತು ಚರ್ಚಿಸಲಾಗಿದೆ.

ಆಧುನಿಕ ವಾಹನಗಳು, ಮಕ್ಕಳ ಆಟಿಕೆಯ ಸಾಮಾನುಗಳು, ಕೊರಳ ಹಾರಗಳು, ವಿವಿಧ ಗಾತ್ರದ ಮಣಿಮುತ್ತುಗಳು, ಅಲಂಕಾರಿಕ ಹೂಜಿಗಳು ಹೀಗೆ ವ್ಯಾಪಕವಾಗಿ ಗೊಂಬೆಗಳ ವಸ್ತು ವೈವಿಧ್ಯತೆಯೂ ಹರಡಿಕೊಳ್ಳುತ್ತದೆ. ವಸ್ತು ವಿಷಯಗಳನ್ನು ಹೇಳುವಾಗ ಆಯಾ ಗೊಂಬೆಗಳ ಆಕಾರ ಭಾವಬಂಗಿಗಳು ರಚನಾ

ಶೈಲಿ ವರ್ಣವಿನ್ಯಾಸ ಪ್ರಭಾವ ಪ್ರೇರಣೆ ತಂತ್ರಗಾರಿಕೆ ಮುಂತಾದ ಅಂಶಗಳನ್ನು ಗಮನಿಸುವುದು ಅವಶ್ಯ ಎಂಬುದನ್ನು ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.

ಚನ್ನಪಟ್ಟಣದ ಗೊಂಬೆಗಳ ರಚನಾ ಹಿನ್ನೆಲೆಯಲ್ಲಿ ಕಲಾವಿದರ ಪಾತ್ರವೇನು, ಈ ಗೊಂಬೆಗಳ ತಯಾರಿಕೆಗೆ ಅವರು ಯಾವ ರೀತಿಯ ಪರಿಕರಗಳನ್ನು ಬಳಸುತ್ತಾರೆ. ಅವುಗಳನ್ನು ಯಾವ ಮೂಲದಿಂದ ಸಂಗ್ರಹಿಸುತ್ತಾರೆ. ಎಂಬಂತಹ ಸಂಗತಿಗಳನ್ನು ತಿಳಿಸಲಾಗಿದೆ. ಅಲ್ಲದೆ ಅವರ ಆರ್ಥಿಕ ಸ್ಥಿತಿಗತಿಗಳು, ಈ ಗೊಂಬೆಗಳ ತಯಾರಿಕೆ ಮತ್ತು ಮಾರಾಟದಿಂದ ಅವರ ಕೌಟುಂಬಿಕ ಜೀವನವು ಪಡೆದುಕೊಂಡಂತಹ ಪ್ರಯೋಜನಗಳು ಮುಂತಾದ ಸಂಗತಿಗಳನ್ನು ಚರ್ಚಿಸಲಾಗಿದೆ. ಇದರ ಜೊತೆಗೆ ಗೊಂಬೆಗಳ ಮಾರಾಟ ವ್ಯವಸ್ಥೆಯಲ್ಲಿ ಪ್ರಾಚೀನ ಕಾಲದ ಮಾರಾಟ ಪದ್ಧತಿಯನ್ನು ತಿಳಿಸುತ್ತಾ ಆ ಕಾಲದಲ್ಲಿ ಗೊಂಬೆಗಳ ಮಾರುಕಟ್ಟೆ ಎಲ್ಲೆಲ್ಲಿ ಉತ್ತಮವಾಗಿತ್ತು ಎಂಬುದನ್ನು ಗಮನಿಸಲಾಗಿದೆ. ಅಲ್ಲದೆ ಇತ್ತೀಚಿನ ದಿನಗಳಲ್ಲಿ ಗೊಂಬೆಗಳ ಆರ್ಥಿಕ ವಹಿವಾಟು ಹೇಗಿದೆ ಎನ್ನುವ ನಿಟ್ಟಿನಲ್ಲಿ ಇನ್ನು ಎಷ್ಟು ಪ್ರಖ್ಯಾತಗೊಂಡಿವೆ ಎಂಬುದನ್ನು ತಿಳಿಸಲಾಗಿದೆ. ಸ್ಥಳೀಯರು, ಸಂಘ ಸಂಸ್ಥೆಗಳು, ಸಹಕಾರಿ ಮಂಡಳಿಗಳು, ಸರಕಾರಗಳು ಈ ಗೊಂಬೆಗಳ ಕಲಾತ್ಮಕ ಉದ್ದಿಮೆಗೆ ಯಾವ ರೀತಿಯ ಪ್ರೋತ್ಸಾಹಗಳನ್ನು ಕೊಟ್ಟಿವೆ ಮತ್ತು ಕೊಡಬೇಕಾಗಿದೆ ಎಂಬುದನ್ನು ಚರ್ಚಿಸಲಾಗಿದೆ.

ಚನ್ನಪಟ್ಟಣದ ಚಿತ್ತಾರದ ಗೊಂಬೆಗಳು ಇವತ್ತಿಗೂ ಹೇಗೆ ತಮ್ಮ ಮಹತ್ವವನ್ನು ಉಳಿಸಿಕೊಂಡು ಬಂದಿವೆ ಹಾಗೂ ಸಮಕಾಲೀನ ಸಂದರ್ಭದಲ್ಲಿ ಈ ಕುಶಲ ಕಲೆಗಳು ಎಷ್ಟು ಪ್ರಯೋಜನ ಎಂಬುದರ ಕುರಿತು ವಿವೇಚಿಸಲಾಗಿದೆ.

ಪ್ರಸ್ತುತ ಸಂಶೋಧನೆಯಲ್ಲಿ ಚನ್ನಪಟ್ಟಣದ ಕಲೆಗಳ ಮೇಲೆ ಆಧುನಿಕತೆ ಹೇಗೆ ಪ್ರಭಾವ ಬೀರಿದೆ ಅವುಗಳು ಹೇಗೆ ನಶಿಸುತ್ತಿವೆ ಈ ಕಲೆಗಳನ್ನು ಉಳಿಸಿ ಬೆಳೆಸಲು ನಾವು ಯಾವ ಪ್ರಯತ್ನ ಮಾಡಬೇಕು ಎಂಬುದನ್ನು ನಿಬಂಧದಲ್ಲಿ ತಿಳಿಸುವ ಪ್ರಯತ್ನ ಮಾಡಲಾಗಿದೆ.

# ಗ್ರಂಥಋಣ

* ಉತ್ತರ ಕರ್ನಾಟಕದ ಭಿತ್ತಿ ಚಿತ್ರಕಲೆ — ಡಾ. ಯಾದಪ್ಪ ಪರದೇಶಿ
ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ
ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೧

* ಕನ್ನಡ ವಿಶ್ವಕೋಶ — ಡಾ. ಕರೀಗೌಡ ಬೀಚನಹಳ್ಳಿ
ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ
ಮೈಸೂರು

* ಕರ್ನಾಟಕ ಕನ್ನಡ ವಿಶ್ವಕೋಶ — (ಸಂ.) ಎಂ. ಭೈರೇಗೌಡ, ತಾ.ಸಿ. ತಿಮ್ಮಯ್ಯ
ಅಖಿಲ ಭಾರತ ೬೭ನೇ ಕನ್ನಡ ಸಾಹಿತ್ಯ ಸಮ್ಮೇಳನ
ಕನಕಪುರ, ಅರ್ಕಾವತಿ ಸ್ಮರಣ ಸಂಚಿಕೆ

* ಕರ್ನಾಟಕ ಕಲೆಗಳು ಸಂಪುಟ-೫ — ಬೆನಕನಹಳ್ಳಿ ಜಿ. ನಾಯಕ
ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

* ಕರ್ನಾಟಕದ ಕರಕುಶಲ ಕಲೆಗಳು — ಬಿ.ಎಂ. ಚಂದ್ರಶೇಖರಯ್ಯ
ಐ.ಬಿ.ಎಚ್. ಪ್ರಕಾಶನ, ಬೆಂಗಳೂರು, ೧೯೮೩

* ಕರ್ನಾಟಕದ ಕರಕುಶಲ ಕಲೆಗಳು — ಬೆನಕನಹಳ್ಳಿ ಜಿ. ನಾಯಕ
ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ೧೯೯೬

* ಕರ್ನಾಟಕದ ಚಿತ್ರಕಲೆಯಲ್ಲಿ ಬಣ್ಣದ ಬಳಕೆ — ಕೆ.ವಿ. ಕಾಳೆ
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

* ಕರ್ನಾಟಕದ ಜನಪದ ಚಿತ್ರಕಲೆ — ಡಾ. ಎಸ್.ಸಿ. ಪಾಟೀಲ
ವೀರಶೈವ ಅಧ್ಯಯನ ಸಂಸ್ಥೆ, ಗದಗ, ೧೯೯೩

* ಕರ್ನಾಟಕದ ಜನಪದ ಶಿಲ್ಪಕಲೆ ಒಂದು ಅಧ್ಯಯನ — ಡಾ. ಶಿವಾನಂದ ಬಂಟನೂರು
ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ
ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

* **ಕರ್ನಾಟಕ ಪ್ರಾಗೈತಿಹಾಸಿಕ ಕಾಲದ ಚಿತ್ರಕಲೆ** — ಅ. ಸುಂದರ
  ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು, ೧೯೯೪

* **ಕರ್ನಾಟಕ ರಥ ಶಿಲ್ಪಕಲೆ** — ಡಾ. ಶಿವಪ್ರಕಾಶ ತುಕ್ಕಣ್ಣವರ
  ಕನ್ನಡ ವಿಶ್ವವಿದ್ಯಾಲಯಕ್ಕೆ ಸದಾರಪಡಿಸಿದ ಪಿಎಚ್.ಡಿ.
  ಮಹಾಪ್ರಬಂಧ, ೨೦೦೪

* **ಕರ್ನಾಟಕ ಸಂಸ್ಕೃತಿ ಸಮೀಕ್ಷೆ** — ಡಾ. ಎಚ್. ತಿಪ್ಪೇರುದ್ರಸ್ವಾಮಿ
  ಡಿ.ವಿ.ಕೆ. ಪ್ರಕಾಶನ, ಮೈಸೂರು, ೧೯೯೨

* **ಕರಕುಶಲ ಕಲೆಗಳು** — (ಸಂ.) ಡಾ. ಕರೀಗೌಡ ಬೀಚನಹಳ್ಳಿ
  ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ

* **ಕರಕುಶಲ ಕಲೆಗಳು** — ಡಿ. ಗಣೇಶ
  ನಿರ್ದೇಶಕರು, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ
  ಮೈಸೂರು, ೧೯೮೯

* **ಕಲಘಟಗಿ ಕಲೆ** — ಶಶಿಕಾಂತ ಬಸರೀಕಟ್ಟೆ
  ಎಂ.ಫಿಲ್ ಸಂಶೋಧನಾ ಪ್ರಬಂಧ

* **ಕಲಾನುಭವ** — ವಿ. ಸೀತಾರಾಮಯ್ಯ
  ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೭೬

* **ಕಲಾ ಪ್ರಪಂಚ** — ಶಿವರಾಮ ಕಾರಂತ
  ವ್ಯಾಸಂಗ ಮತ್ತು ವಿಸ್ತರಣ ಪ್ರಕಟಣ ವಿಭಾಗ
  ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೮

* **ಕಲಾ ಪ್ರಪಂಚ** — ಶಿವರಾಮ ಕಾರಂತ
  ಎಸ್.ಬಿ.ಎಸ್. ಪಬ್ಲಿಷರ್ಸ್, ಬೆಂಗಳೂರು, ೨೦೦೯

* **ಕಲಾ ಕೋಶ** — ಎನ್. ಮರಿಶಾಮಾಚಾರ್
  ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು, ೧೯೯೯

* **ಕಲೆ ಎಂದರೇನು?** — (ಸಂ.) ಡಾ. ಎಸ್.ಸಿ. ಪಾಟೀಲ
  ಕನ್ನಡ ಪುಸ್ತಕ ಪ್ರಕಾಶನ, ಬೆಂಗಳೂರು, ೧೯೯೯

* ಕಿನ್ನಾಳ ಕಲೆ
ನೃತ್ಯಕಲಾ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ — ರವಿನಾಯ್ಕ
ಎಂ.ಫಿಲ್ ಸಂಶೋಧನಾ ಪ್ರಬಂಧ

* ಗ್ರಾಮೀಣ ಅಭಿವೃದ್ಧಿಯಲ್ಲಿ ಗೃಹಕೈಗಾರಿಕೆಗಳು
ಶ್ರೀಕೃಷ್ಣ ಬುಕ್ ಏಜೆನ್ಸಿ — ಜೆ.ಗೋ. ರಮೇಶ

* ಗೊಂಬೆಯಾಟ — ರಾಮಚಂದ್ರಗೌಡ
ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ೧೯೮೦

* ಚಿತ್ರಕಲೆ — ಅ.ನ. ಕೃಷ್ಣರಾವ್
ಎಚ್. ವೆಂಕಟರಾಮಯ್ಯ ಅಂಡ್ ಸನ್ಸ್
ವಿದ್ಯಾನಿಧಿ ಬುಕ್ ಡಿಪೊ, ಮೈಸೂರು, ೧೯೨೦

* ಚಿತ್ತಾರದ ಗೊಂಬೆ — ಗೋವಿಂದರಾಜನ
ಕರ್ನಾಟಕ ಲಲಿತಕಲಾ ಅಕಾಡೆಮಿ
ಬೆಂಗಳೂರು, ೨೦೦೪

* ಚಿತ್ರಕಲಾ ಚಿಂತನೆ — ಶಂಕರ ಪಾಟೀಲ
ಪ್ರಗತಿ ಪ್ರಕಾಶನ, ಕಲಾಭವನ,
ದಾವಣಗೆರೆ, ೧೯೯೫

* ಚಿತ್ರಕಲೆ ಮತ್ತು ಪೂರಕ ಕ್ಷೇತ್ರಗಳು — (ಸಂ.) ಡಾ. ಎಸ್.ಸಿ. ಪಾಟೀಲ
ವಜ್ರಮಹೋತ್ಸವ ಸ್ಮರಣ ಸಂಚಿಕೆ,
ಹಾಲಭಾವಿ ಸ್ಕೂಲ್ ಆಫ್ ಆರ್ಟ್, ಧಾರವಾಡ, ೧೯೯೫

* ಚಿತ್ರಕಲಾ ಪ್ರಪಂಚ — (ಪ್ರ.ಸಂ.) ಡಾ. ಪಿ.ಆರ್. ತಿಪ್ಪೇಸ್ವಾಮಿ
ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು, ೧೯೯೩

* ಚಿತ್ರಕಲೆ ಮತ್ತು ಮನೋವಿಕಾಸ — ಡಾ. ಸಿ.ಆರ್. ಚಂದ್ರಶೇಖರ
ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು, ೧೯೯೪

* ಜಾನಪದ ಲೋಕ ಸಂಕಥನ — ವೆಂಕಟೇಶ
ಜಾನಪದ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ
ಎಂ.ಫಿಲ್ ಸಂಶೋಧನಾ ಪ್ರಬಂಧ

* ದಕ್ಷಿಣ ಕರ್ನಾಟಕದ ಜನಪದ ಶಿಲ್ಪಕಲೆ — ಜಿ. ಲಕ್ಷ್ಮೀಪತಿ
ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ
ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೯

* ದೃಶ್ಯ ಸಂಚಾಲನ — ಡಾ. ಎಸ್.ಸಿ. ಪಾಟೀಲ
ರಾಷ್ಟ್ರೀಯ ದೃಶ್ಯಕಲಾ ಅಕಾಡೆಮಿ
ಧಾರವಾಡ, ೨೦೧೦

* ನಿಜದ ನೆಲೆ — (ಸಂ.) ಡಾ. ಎಸ್.ಸಿ. ಪಾಟೀಲ
ವೈರಾಗ್ಯದ ಮಲ್ಲಣಾರ್ಯ ಪ್ರಕಾಶನ
ಬಾಗಲಕೋಟೆ, ೨೦೦೨

* ಭಾರತೀಯ ಕರಕುಶಲ ಕಲೆಗಳ ಉಗಮ ಮತ್ತು ವಿಕಾಸ ಸೃಷ್ಟಿ — ಡಾ. ಬಿ.ಕೆ. ಹಿರೇಮಠ
ಬಾಪೂಜಿ ಗ್ರಾಮೀಣ ಅಭಿವೃದ್ಧಿ ಸಂಸ್ಥೆ, ಬಾಗಲಕೋಟೆ, ೨೦೦೩

* ಭಾರತೀಯ ಚಿತ್ರಕಲೆ — ಡಾ. ಶಿವರಾಮ ಕಾರಂತ
ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು

* ಭಾರತದ ಜನಪದ ಕಲೆ — ಎನ್. ಮರಿಶಾಮಾಚಾರ್
ಸಿ.ಎಂ.ಎನ್. ಪ್ರಕಾಶನ, ಬೆಂಗಳೂರು, ೧೯೯೧

* ಬಳ್ಳಾರಿ ಜಿಲ್ಲೆಯ ವರದ ವಾಸ್ತು — ಡಾ. ಸಿ. ಮಹಾದೇವ
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೦

* ಮಕ್ಕಳ ಚಿತ್ರಕಲೆ — ಬಿ.ಪಿ. ಬಾಯಿರಿ
ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ
ಮೈಸೂರು. ೧೯೯೮

* ಮೈಸೂರು ರಾಜ್ಯದಲ್ಲಿ ವಾಣಿಜ್ಯ ಮತ್ತು ಕರಕುಶಲ ಕಲೆಗಳು — ಅಕ್ಷರ ಪ್ರಕಾಶನ ಹೆಗ್ಗೋಡು
ಅಕ್ಷರ ಪ್ರಕಾಶನ ಹೆಗ್ಗೋಡು, ೧೮೦೦-೧೯೯೧

* ರೇಖಾಚಿತ್ರ (ಸಂ.) ಜಿ.ವಿ.ಕೆ. ಶಾಸ್ತ್ರಿ
ಕರ್ನಾಟಕ ಲಲಿತಕಲಾ ಅಕಾಡೆಮಿ
ಬೆಂಗಳೂರು, ೧೯೯೧

* ವರ್ಣಾ ವರಣ ಚಿ.ಸು. ಕೃಷ್ಣಶೆಟ್ಟಿ
ಚಿತ್ತಾರ ಪ್ರಕಾಶನ
ಬೆಂಗಳೂರು, ೨೦೦೧

* ವರ್ಣ ಸಂಚಯ ಡಾ. ಎಸ್.ಸಿ. ಪಾಟೀಲ
ಪ್ರಕಟಣೆ ವಿಜಯ ಲಲಿತಕಲಾ ಮಹಾವಿದ್ಯಾಲಯ,
ಇಲಕಲ್, ೨೦೦೭

* ಸಮಕಾಲೀನ ಶಿಲ್ಪಕಲೆಯಲ್ಲಿ ಜನಪದ ಕಲೆಯ ಪ್ರಭಾವ ಡಾ. ಅ.ಲ. ನರಸಿಂಹನ್
ಸಂಯೋಜಿತ ಪ್ರಕಾಶನ, ಬೆಂಗಳೂರು, ೧೯೯೯

* ಸಂಕುಲ (ಸಂ.) ಡಾ. ವಿಜಯ
ಅಸೀಮಾ ಪ್ರಕಾಶನ, ಬೆಂಗಳೂರು, ೧೯೯೦

* ಸಂಯೋಜನೆ ಡಾ. ಅ.ಲ. ನರಸಿಂಹನ್
ಸಂಯೋಜಿತ ಪ್ರಕಾಶನ
ಬೆಂಗಳೂರು, ೧೯೭೫

* ಸೌಂದರ್ಯ ಮತ್ತು ಕಲೆ ಕೆ.ಬಿ. ರಾಮಕೃಷ್ಣರಾವ್
ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ
ಮೈಸೂರು

* ಸೌಂದರ್ಯ ಮತ್ತು ರಸಸ್ವಾಧನೆ (ಸಂ.) ಎಂ.ಎಚ್. ಕೃಷ್ಣಯ್ಯ
ಕರ್ನಾಟಕ ಲಲಿತಕಲಾ ಅಕಾಡೆಮಿ
ಬೆಂಗಳೂರು, ೧೯೮೯

ಪತ್ರಿಕೆಗಳು

* ಕಸ್ತೂರಿ ಮಾಸಿಕ ಪತ್ರಿಕೆ, ಪದ್ಮಾ ಶ್ರೀರಾಮ, ನವೆಂಬರ್, ೧೯೯೩
* ಸಂಡೆ ದಿ ಇಂಡಿಯನ್ ಸಂ.೩ ಸಂಚಿಕೆ ೩೦, ಆಗಸ್ಟ್ ೯, ೨೦೧೦ (ಸಂ.) ಅರಿಂದಮ್ ಚೌಧರಿ
ಎ. ಸಂದೀಪ್ (ಎಸ್.ಕೆ. ಸುಪ್ರಭಾ)

## ವಕ್ತೃಗಳ ಮಾಹಿತಿ

| ಸಂ. | ಹೆಸರು | ವಯಸ್ಸು | ಕಾರ್ಯಾವರ್ಧಿ | ಶಿಕ್ಷಣ | ಊರು |
|---|---|---|---|---|---|
| ೧ | ಅನೀಲ್ ಕುಮಾರ | ೪೮ | ೧೦ ವರ್ಷದಿಂದ | ಬಿ.ಎ. ಪದವಿ | ಚನ್ನಪಟ್ಟಣ |
| ೨. | ಅಬೀಬ್ ಪಾಷ್ | ೪೪ | ೧೦ " | ೧೦ನೇ ತರಗತಿ | ತೋಟೆ |
| ೩. | ಇಲಿಯಾಜ್ ಪಾಷ್ | ೪೫ | ೩೦ " | ೭ನೇ " | ತೋಟೆ |
| ೪. | ಜಭಿ | ೨೬ | ೧೦ " | ೧೦ನೇ " | ಕಲಾನಗರ |
| ೫. | ಜಾವೀದ್ | ೨೭ | ೧೦ " | ೭ನೇ " | ಕಲಾನಗರ |
| ೬. | ನರಹರಿ | ೫೦ | ೩೦ " | ಬಿ.ಎ. ಪದವಿ | ಕೋಟೆ |
| ೭. | ಸಿ. ಪಾಪಣ್ಣ | ೪೫ | ೩೦ " | ೯ನೇ ತರಗತಿ | ಚನ್ನಪಟ್ಟಣ |
| ೮. | ಮಹಮ್ಮದ್ ಸೈಯದ್ | ೪೧ | ೩೦ " | -- | ಕಲಾನಗರ |
| ೯. | ಮಹಮ್ಮದ್ ಫಾರುಕ್ | ೩೫ | ೨೦ " | ೧೦ನೇ ತರಗತಿ | ಎಲೆಕೋಟೆ |
| ೧೦. | ಮುಜೀಬ್ | ೩೮ | ೨೦ " | ೧೦ " | ಕಲಾನಗರ |
| ೧೧. | ಮುನೀರ್ ಪಾಷ್ | ೫೦ | ೩೦ " | ೦೭ " | ಕಲಾನಗರ |
| ೧೨. | ರುಕ್ಕಮ್ಮ | ೩೮ | ೨೦ " | -- | ಚನ್ನಪಟ್ಟಣ |
| ೧೩. | ಶಾಬಜ್ | ೧೬ | ೦೫ " | ಪಿಯುಸಿ | ಕಲಾನಗರ |
| ೧೪. | ಸಮೀರ್ ಅಬ್ದುಲ್ | ೩೫ | ೨೫ " | ೮ನೇ ತರಗತಿ | ಕಲಾನಗರ |
| ೧೫. | ಸೈಯದ್ ಆಕ್ರಮ್ | ೯೭ | ೨೦ " | ೮ " | ಕಲಾನಗರ |
| ೧೬. | ಸೈಯದ್ ಖಾಸಿಂ | ೪೬ | ೨೦ " | -- | ಕಲಾನಗರ |
| ೧೭. | ಸೈಯದ್ ಸಮಿವುಲ್ಲಾ | ೫೦ | ೦೫ " | ೭ನೇ ತರಗತಿ | ಕಲಾನಗರ |
| ೧೮. | ಸೈಯದ್ ಸಮೀವುಲ್ಲಾ | ೫೦ | ೩೫ " | -- | ಕಲಾನಗರ |
| ೧೯. | ಸೈಯದ್ ಸಲಿಂ | ೪೦ | ವೃತ್ತಿನಿರತ | ೮ನೇ ತರಗತಿ | ಕಲಾನಗರ |

